# ಅಸಂಘಟಿತ ವಲಯ. ಕಟ್ಟಡ ಕಾರ್ಮಿಕರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ ಪೆರ್ನೆ ಗ್ರಾಮದ ಒಂದು ಅಧ್ಯಯನ.

ಕನ್ನಡ ವಿಶ್ವವಿದ್ಯಾಲಯ ಹಂಪಿಯ ಅಭಿವೃದ್ಧಿ ಅಧ್ಯಯನದ ಎಂ.ಫಿಲ್
ಪದವಿಗಾಗಿ ಅರ್ಪಿಸಿದ ನಿಬಂಧ


ಸಂಶೋಧಕರು

**ಪ್ರವೀಣ .ಯಸ್.**

ನೋಂದಣಿ ಸಂಖ್ಯೆ-೧೬೧೧೧೧೦೩೦೦೫೦

ಮಾರ್ಗದರ್ಶಕರು

**ಡಾ.ರೇಣುಕಾ.ಕೆ.**

ಅಸೋಸಿಯೇಟ್ ಪ್ರೊಫೆಸರ್

ಶ್ರೀ ಗೋಕರ್ಣನಾಥೇಶ್ವರ ಕಾಲೇಜು ಮಂಗಳೂರು



೨೦೧೭

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ ಮಂಗಳೂರು-೫೭೫೦೦೧

# ಅಸಂಘಟಿತ ವಲಯ. ಕಟ್ಟಡ ಕಾರ್ಮಿಕರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ ಪೆರ್ನೆ ಗ್ರಾಮದ ಒಂದು ಅಧ್ಯಯನ.

ಕನ್ನಡ ವಿಶ್ವವಿದ್ಯಾಲಯ ಹಂಪಿಯ ಅಭಿವೃದ್ಧಿ ಅಧ್ಯಯನದ ಎಂ.ಫಿಲ್ ಪದವಿಗಾಗಿ ಅರ್ಪಿಸಿದ ನಿಬಂಧ


ಸಂಶೋಧಕರು

ಪ್ರವೀಣ .ಯಸ್.

ನೋಂದಣಿ ಸಂಖ್ಯೆ-೧೬೧೧೧೧೦೩೦೦೫೦

ಮಾರ್ಗದರ್ಶಕರು

ಡಾ.ರೇಣುಕಾ.ಕೆ.

ಅಸೋಸಿಯೇಟ್ ಪ್ರೊಫೆಸರ್

ಶ್ರೀ ಗೋಕರ್ಣನಾಥೇಶ್ವರ ಕಾಲೇಜು ಮಂಗಳೂರು





೨೦೧೭

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ ಮಂಗಳೂರು-೫೭೫೦೦೧

ಯೋಗ್ಯತಾ ಪತ್ರ

ಪ್ರವೀಣ.ಯಸ್ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ **ಅಸಂಘಟಿತ ವಲಯ. ಕಟ್ಟಡ ಕಾರ್ಮಿಕರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ ಪೆರ್ನೆ ಗ್ರಾಮದ ಒಂದು ಅಧ್ಯಯನ** ಎಂಬ ಶಿರ್ಷಿಕೆಯ ಈ ನಿಬಂಧವನ್ನು ಎಂ.ಫಿಲ್. ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿಧ್ಯಾನಿಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ನಿಬಂಧವು ಸಂಶೋಧಕರ ಸ್ವಂತ ಪರಿಶ್ರಮ , ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಹಾಗೂ ಇನ್ನಿತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲ.

ಡಾ.ರೇಣುಕಾ.ಕೆ

ಸಂಶೋಧನಾ ಮಾರ್ಗದರ್ಶಕರು

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ ಮಂಗಳೂರು–೫೭೫೦೦೧

ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿಧ್ಯಾಲಯದ ಎಂ.ಫಿಲ್. ಪದವಿಗಾಗಿ ಸಾದರ ಪಡಿಸುವ **ಅಸಂಘಟಿತ ವಲಯ. ಕಟ್ಟಡ ಕಾರ್ಮಿಕರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ ಪೆರ್ನೆ ಗ್ರಾಮದ ಒಂದು ಅಧ್ಯಯನ** ಎಂಬ ಶೀರ್ಷಿಕೆಯ ನಿಬಂಧವು ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ.ರೇಣುಕಾ.ಕೆ. ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ನಿಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

ಪ್ರವೀಣ.ಯಸ್.

ಸಂಶೋಧಕರು

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ ಮಂಗಳೂರು–೫೭೫೦೦೧

# ಅಧ್ಯಯನದ ವಿವರಗಳು

# ಕೋಷ್ಟಕಗಳ ಪಟ್ಟಿ

**ಪೀಠಿಕೆ :**

ಅಭಿವೃದ್ಧಿ ಎನ್ನುವುದು ನಿರಂತರವಾದ ಚಲನಶೀಲ ಪ್ರಕ್ರಿಯೆಯಾಗಿದೆ. ಪ್ರತಿಯೊಂದು ದೇಶವೂ ಅಭಿವೃದ್ಧಿಗೆ ತೆರೆದುಕೊಳ್ಳಲೇಬೇಕಾಗಿದೆ, ಅದಕ್ಕೆ ತಕ್ಕ ರೀತಿಯಲ್ಲಿ ಜನಜೀವನ, ಪರಿಸರ ಸಂಸ್ಕೃತಿ ಮುಂತಾದವುಗಳು ಬದಲಾವಣೆಯನ್ನು ಕಂಡುಕೊಳ್ಳಬೇಕಾಗಿದೆ. ಅಭಿವೃದ್ಧಿಯ ೨ ಆಯಾಮಗಳೇ ಚಲನಶೀಲತೆ ಹಾಗೂ ಬದಲಾವಣೆ . ಅಭಿವೃದ್ಧಿಯು ಬೆಳವಣಿಗೆ ಎಂದು ಪರಿಭಾವಿಸಿದಾಗ ಅದು ಆವಿಷ್ಕಾರಗಳ ಜೊತೆಗೂಡಿಯೇ ಸಾಗಬೇಕು. ಒಂದು ಪ್ರದೇಶ ಅಭಿವೃದ್ಧಿಯಾಗುವುದೆಂದರೆ ಅಲ್ಲಿ ರಚನಾತ್ಮಕ ಪರಿವರ್ತನೆ, ವೈಜ್ಞಾನಿಕ ಮುನ್ನಡೆ, ತಂತ್ರಜ್ಞಾನದ ಬಳಕೆ ,ನಾಯಕತ್ವದ ದೂರದರ್ಶಿತ್ವ, ಆರ್ಥಿಕತೆ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಸುಧಾರಣೆಗಳಾಗಬೇಕು. ಒಟ್ಟಿನಲ್ಲಿ ಅಲ್ಲಿರುವ ಜನರ ಜೀವನ ಸ್ಥಿತಿಗತಿಗಳು ಸುಧಾರಿಸಬೇಕು.

ಅಭಿವೃದ್ಧಿ ಎನ್ನುವುದು ಬಹುಮುಖ ಸ್ವರೂಪವುಳ್ಳದ್ದು. ಅದರ ಗುರಿಯು ಮನುಷ್ಯ ಜೀವನವನ್ನು ಉತ್ತಮಗೊಳಿಸುವುದಾಗಿದೆಯಲ್ಲದೆ, ಅದು ದೀರ್ಘಾವಧಿ ಪ್ರಕ್ರಿಯೆಗಳನ್ನು ಒಳಗೊಂಡಿರುತ್ತದೆ. ಯಾವುದೇ ಪ್ರದೇಶವಿರಲಿ ಅಲ್ಪಕಾಲದಲ್ಲಿ ಪವಾಡ ಸದೃಶವಾಗಿ ಪ್ರಗತಿಹೊಂದಲು ಸಾಧ್ಯವಿಲ್ಲ. ಅದರ ಹಿಂದೆ ಚಾಲನಾಶಕ್ತಿಯಾಗಿ ಜನನಾಯಕರಿರಬೇಕಾಗುವುದು ಅನಿವಾರ್ಯ. ಅವರಿಗೆ ಅಭಿವೃದ್ಧಿ ಎನ್ನುವುದು ಸವಾಲಾತ್ಮಕವಾದರೂ ಮುಂದಿನ ಪೀಳಿಗೆಗೆ ನಿರಂತರವಾಗಿ ವಿಕಾಸ ಮತ್ತು ಪರಿಶ್ರಮಗಳ ಫಲವು ದೊರೆಯುತ್ತದೆ. ಅಭಿವೃದ್ಧಿಯಲ್ಲಿ ವ್ಯಕ್ತಿ ಮತ್ತು ಸಮಾಜಗಳೆರಡೂ ಉನ್ನತಿಯನ್ನು ಸಾಧಿಸಬೇಕೆನ್ನುವುದು ಎಲ್ಲರೂ ಒಪ್ಪಬಹುದಾದ ವಿಷಯವೇ ಆಗಿದೆ. ಅಂತಹ ಪ್ರಯತ್ನಗಳಿಂದಾಗಿ ಜನರು ಸ್ವ ಗೌರವ, ಅಭಿವ್ಯಕ್ತಿ ಸ್ವಾತಂತ್ರ್ಯ ಉನ್ನತ ಜೀವನ ಮೌಲ್ಯಗಳ ಅಳವಡಿಕೆ, ಸಾಮಾಜಿಕ ಸೌಹಾರ್ದತೆ, ಸಂಸ್ಕೃತಿ ಜೀವನ ಮೌಲ್ಯಗಳ ಸಡುವೆ ಪ್ರೀತಿ ಮುಂತಾದವುಗಳನ್ನು ಪಡೆಯುವುದು ನಿರ್ದಿಷ್ಟ ಗುರಿಯಾಗಿರುತ್ತದೆ.

ಅಭಿವೃದ್ಧಿಯನ್ನು ವಿಶ್ಲೇಷಿಸುವುದು ಸುಲಭವಲ್ಲ. ಅದು ವ್ಯಕ್ತಿ ನಿಷ್ಟ ದೃಷ್ಟಿಕೋನಗಳನ್ನು ಒಳಗೊಂಡಿರುತ್ತದೆ. ಅದನ್ನು ಖಚಿತವಾಗಿ ಅಳೆಯಲು ಕಷ್ಟ. ಈ ಹಿನ್ನೆಲೆಯಿಂದ ಅರ್ಥಶಾಸ್ತ್ರಜ್ಞರು ಅಭಿವೃದ್ಧಿಯ ಸರಿಯಾದ ಮಾಪನ ಅಸಾಧ್ಯವೆಂದು ಪರಿಭಾವಿಸುತ್ತಾರೆ. ಆದರೆ ಸಂಶೋಧನಾ ಅಧ್ಯಯನ ದೃಷ್ಟಿಯಿಂದ ಅಭಿವೃದ್ಧಿಯನ್ನು ವ್ಯಾಖ್ಯಾನಿಸುವುದು ಅಗತ್ಯ. ಅಭಿವೃದ್ಧಿಯ ಹುಡುಕಾಟ ಕಾಲ್ಪನಿಕವಾಗಿರಬಾರದು. ಆದ್ದರಿಂದ ಕೆಲವು ಉಲ್ಲೇಖಗಳು ಇಲ್ಲಿ ಅಗತ್ಯ ಓಕನ್ ಮತ್ತು ರಿಚರ್ಡ್‌ಸನ್ ಎಂಬ ತಜ್ಞರು ಆರ್ಥಿಕ ಅಭಿವೃದ್ಧಿಯ ಅಧ್ಯಯನಗಳು ಎಂಬ ಕೃತಿಯಲ್ಲಿ "ಆರ್ಥಿಕ ಅಭಿವೃದ್ಧಿಯು ಸರಕು ಮತ್ತು ಸೇವೆಗಳ ಹೆಚ್ಚಳವನ್ನು ಪ್ರತಿಬಿಂಬಿಸುವ ಕಲ್ಯಾಣದ ದೀರ್ಘಕಾಲದ ಸುಧಾರಣೆಯಾಗಿದೆ" ಎಂದಿರುತ್ತಾರೆ. ಇದನ್ನು ಗಮನಿಸಿದರೆ ಅಭಿವೃದ್ಧಿ ಎನ್ನುವುದು ರಾಷ್ಟ್ರೀಯ ಆದಾಯದ ನೆಲೆಯಿಂದ ರೂಪುಗೊಳ್ಳುತ್ತದೆ.

ಅಭಿವೃದ್ಧಿಯನ್ನು ಪ್ರೇರೇಪಿಸುವ ಹಾಗೂ ಪ್ರಭಾವಿಸುವ ಸಾಂಸ್ಕೃತಿಕ, ಸಾಮಾಜಿಕ ಮತ್ತು ಅಂತರಾಷ್ಟ್ರೀಯ ಅಂಶಗಳೆಲ್ಲವನ್ನೂ ಪರಿಗಣಿಸಿಕೊಂಡು ವಿಶ್ವ ಸಂಸ್ಥೆಯ ತಜ್ಞರ ಸಮಿತಿಯೊಂದು ಅಭಿವೃದ್ಧಿಯನ್ನು ವ್ಯಾಖ್ಯಾನಿಸುತ್ತದೆ. "ಅಭಿವೃದ್ಧಿಯು ಭೌತಿಕ ಅಗತ್ಯಗಳನ್ನು ಮಾತ್ರವಲದೆ . ಮನುಷ್ಯನ ಸಾಮಾಜಿಕ ಜೀವನವನ್ನೂ ಒಳಗೊಂಡಿರುತ್ತದೆ. ಅಭಿವೃದ್ಧಿಯೆಂದರೆ ಆರ್ಥಿಕ ಬೆಳವಣಿಗೆ ಮಾತ್ರವಲ್ಲ, ಜೊತೆಗೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳನ್ನು ಒಳಗೊಂಡಿರುತ್ತದೆ"[3].

ಅಭಿವೃದ್ಧಿ ಅಧ್ಯಯನದ ಪರಿಣತ ಮೈಖೇಲ್ ಟೋಡೀ ರೋ ಅವರಭಿಪ್ರಾಯಗಳು ಅಧ್ಯಯನಕ್ಕೆ ಪೂರಕವಾಗಿರುವ ಚಿಂತನೆಗಳಾಗಿವೆ. ಅವರು ತೃತೀಯ ವಿಶ್ವದಲ್ಲಿ ಆರ್ಥಿಕ ಅಭಿವೃದ್ಧಿ ಎಂಬ ಕೃತಿಯಲ್ಲಿ ಅಭಿವೃದ್ಧಿಯನ್ನು ಸಾಮಾಜಿಕ ರಚನೆಗಳಲ್ಲಿ ಜನರ ವರ್ತನೆಗಳಲ್ಲಿ ಮತ್ತು ಸಂಘ ಸಂಸ್ಥೆಗಳಲ್ಲಿ ಬೃಹತ್ ಬದಲಾವಣೆಯನ್ನು ಹಾಗೂ ಆರ್ಥಿಕ ಬೆಳವಣಿಗೆಗಳ ವೇಗೋತ್ಕರ್ಷ, ಅಸಮಾನತೆಯ ಇಳಿಕೆ ಮತ್ತು ನಿರಪೇಕ್ಷ ಬಡತನದ ನಿವಾರಣೆಗಳನ್ನು ಒಳಗೊಂಡಿರುವ ಪ್ರಕ್ರಿಯೆ ಎಂದು ಉಲ್ಲೇಖಿಸಿದ್ದಾರೆ. ಈ ವ್ಯಾಖ್ಯೆಯನ್ನು ವಿಶ್ಲೇಷಿಸುವಾಗ ಅಭಿವೃದ್ದಿ ಎನ್ನುವುದು ಒಂದು ಸಮಗ್ರ ಸುಧಾರಣೆ ಹಾಗೂ ಸಕಾರಾತ್ಮಕ ಬದಲಾವಣೆ ಎನ್ನುವ ಅಭಿಪ್ರಾಯಗಳು ಅಭಿವ್ಯಕ್ತಗೊಳ್ಳುತ್ತದೆ.

ಯಾವುದೇ ಪ್ರದೇಶವಿರಲಿ, ಅದರ ಅಭಿವೃದ್ಧಿಯನ್ನು ಕುರಿತಂತೆ ಪರಿಶೀಲಿಸುವಾಗ ಹಲವು ಅಂಶಗಳಿಂದ ಆವರಿಸಿಕೊಂಡ ವಿಷಯವಾಗಿದೆ ಎನ್ನುವುದು ತಿಳಿಯುತ್ತದೆ. ಅಭಿವೃದ್ಧಿ ಅಧ್ಯಯನ, ಅಭಿವೃದ್ಧಿ ಸಮಸ್ಯೆ, ಅಭಿವೃದ್ಧಿ ಹೊಂದುತ್ತಿರುವ ದೇಶ, ಹಿಂದುಳಿದ ಪ್ರದೇಶಗಳು, ಅಭಿವೃದ್ಧಿ ಸರಕಾರ, ಅಭಿವೃದ್ಧಿ ನೆರವು ಯೋಜನೆಗಳು, ಸರ್ಕಾರಿ ನೀತಿಗಳು, ನಾಯಕತ್ವದ ಪಾತ್ರ . ಹೀಗೆ ಹಲವಾರು ಆಯಾಮಗಳನ್ನು 'ಅಭಿವೃದ್ದಿ' ಪಡೆದಿರುತ್ತದೆ. ಈ ಕುರಿತಾದ ಒಟ್ಟು ವಿಶ್ಲೇಷಣೆಯಲ್ಲಿ ಒಂದು ಸತ್ಯ ಗೋಚರಿಸುತ್ತದೆ. ಬಡತನ, ಬಡತನ–ಶ್ರೀಮಂತಿಕೆಯ ನಡುವಣ ವ್ಯತ್ಯಾಸಗಳು, ಜೊತೆಗೆ ಪ್ರಶ್ನೆಯೊಂದು ಎದುರಾಗುತ್ತದೆ, ಹಿಂದುಳಿದ ಪ್ರದೇಶ ಹಿಂದುಳಿಯಲು, ಶ್ರೀಮಂತ ಪ್ರದೇಶ ಹೆಚ್ಚು ಶ್ರೀಮಂತವಾಗಲು ಕಾರಣವೇನು?. ಹಿಂದುಳಿದ ಪ್ರದೇಶದಲ್ಲಿ ಜನಜೀವನದ ಗುಣಮಟ್ಟವನ್ನು ಹೆಚ್ಚಿಸಲು ಮಾಡಬಹುದಾದ ಪ್ರಯತ್ನಗಳೇನು ? ಇತ್ಯಾದಿಗಳ ಹಿನ್ನೆಲೆಯಿಂದ ಅಭಿವೃದ್ಧಿಯನ್ನು ಪರಿಶೀಲಿಸುವಾಗ ಮುಖ್ಯವಾಗಿ ಇದು ಆರ್ಥಿಕ ಪ್ರಗತಿ , ಆದಾಯದ ಹೆಚ್ಚಳವೆನ್ನುವ ಒಳ ನೋಟವೊಂದು ಸಿಗುತ್ತದೆ.

ಅಭಿವೃದ್ದಿ ಎನ್ನುವುದು ಕೇವಲ ಆರ್ಥಿಕ ಬೆಳವಣಿಗೆಗೆ ಮಾತ್ರ ಸಂಬಂಧಿಸಿದ್ದು ಅಲ್ಲ. ಅಭಿವೃದ್ದಿಯು ಆರ್ಥಿಕ ಬೆಳವಣಿಗೆಗಿಂತ ಹೆಚ್ಚಿನ ಅರ್ಥವನ್ನು ಪಡೆದಿರುವುದು ಕಾಣುತ್ತದೆ. ಆರ್ಥಿಕ ಬೆಳವಣಿಗೆಯಲ್ಲಿ ಗುಣಾತ್ಮಕ ಬದಲಾವಣೆಗಳನ್ನು ಕಾಣಬೇಕಾಗಿದೆ . ಆರ್ಥಿಕ ರಚನೆ ಮತ್ತು ಉತ್ಪಾದನೆಗಳ ಗುಣಮಟ್ಟವೂ ಹೆಚ್ಚಳವಾಗಬೇಕು. ಜೊತೆಗೆ ಒಂದು ಪ್ರದೇಶದಲ್ಲಿ ಅಕ್ಷರತೆ, ಆರೋಗ್ಯದ ಗುಣಮಟ್ಟ, ಪೌಷ್ಟಿಕ ಆಹಾರ, ಶಿಕ್ಷಣ, ಇತ್ಯಾದಿಗಳು

ಸಾಗಬೇಕಾಗಿದೆ. ಆದುದರಿಂದ ಸಂಪನ್ಮೂಲಗಳನ್ನು ಕ್ರೋಢೀಕರಿಸಿಕೊಂಡು ಆ ಪ್ರದೇಶದ ಒಟ್ಟು ಪ್ರಗತಿಗೆ ಹೋರಾಡುವ ನಾಯಕರು ಅಗತ್ಯವೆನ್ನುವುದನ್ನು ಗಮನಿಸಬೇಕು.

## ಅಭಿವೃದ್ಧಿಯಲ್ಲಿ ಅಸಂಘಟಿತ ವಲಯ

ಕೆಲಸದ ಭದ್ರತೆ ಇರುವ ಸರಕಾರವು ಕಾರ್ಮಿಕರಿಗಾಗಿ ರೂಪಿಸಿರುವ ಕಾನೂನುಗಳನ್ನು ಪಾಲಿಸುವಂತಹ ಸಂಘಸಂಸ್ಥೆಗಳಲ್ಲಿನ ದುಡಿಮೆಯನ್ನು ಸಂಘಟಿತ ವಲಯದ ದುಡಿಮೆ ಎನ್ನುತ್ತಾರೆ . ಇಲ್ಲಿ ನೌಕರರ ವೇತನ, ಕೆಲಸದ ಅವಧಿ, ಕೆಲಸದ ವಿಧಾನ ಇತ್ಯಾದಿಗಳನ್ನು ಸಂಘಟನಕಾರರು ಕಾರ್ಮಿಕ ಸಂಘಟನೆಗಳೊಂದಿಗೆ ಚರ್ಚಿಸಿ ನಿರ್ಣಯಿಸುವುದು. ಇಲ್ಲಿ ಕಾರ್ಮಿಕರಿಗೆ ಯಾವುದೇ ರೀತಿಯ ಸಮಸ್ಯೆಗಳು ಉಂಟಾದಾಗ ಬೇಕಾದ ಸೌಲಭ್ಯಗಳನ್ನು ಒದಗಿಸುವಲ್ಲಿ ಕ್ರಮ ಕೈಗೊಳ್ಳುವುದು. ಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರಿಗೆ ಇರುವ ರಕ್ಷಣೆಯು ಹೆಚ್ಚಾಗಿದ್ದು, ಅವರು ಪಡೆದುಕೊಳ್ಳುವ ಸೌಲಭ್ಯವೂ ಅಧಿಕವಾಗಿದೆ. ಇವರು ದೊಡ್ಡ ಮತ್ತು ಸಣ್ಣ ಕೈಗಾರಿಕೆಗಳು ಅಂದರೆ ಫ್ಯಾಕ್ಟರಿ ಕಾಯಿದೆಯ ನಿಯಂತ್ರಣದಲ್ಲಿರುವ ಕೈಗಾರಿಕೆಗಳಲ್ಲಿನ ದುಡಿಯುವ ಕಾರ್ಮಿಕರಿದ್ದಾರೆ.

ಉದ್ಯೋಗ ಭದ್ರತೆಯನ್ನು ಒದಗಿಸುವ ಮತು ಸೇವಾನಿಯಮಗಳನನ್ನು ಪಾಲಿಸುವ ಸಲುವಾಗಿ ಸರಕಾರ ರೂಪಿಸಿರುವ ಶಾಸನಗಳು ಮತ್ತು ಕಾನೂನುಗಳ ಚೌಕಟ್ಟಿನಿಂದ ಹೊರಗಿರುವ ಕಾರ್ಮಿಕ ಸಂಘ, ಸಂಘಟನೆಗಳು ಇಲ್ಲದ ಉತ್ಪಾದನ ಘಟಕಗಳನನ್ನು ಅಸಂಘಟಿತ ಮತ್ತು ಅನೌಪಚಾರಿಕ ಘಟಕಗಳೆಂದೂ ಅಲ್ಲಿ ದುಡಿಯುವ ದುಡಿಮೆಗಾರರನ್ನು ಅಸಂಘಟಿತ ದುಡಿಮೆಗಾಂರೆಂದೂ ಕರೆಯುವರು.

ಯಾವುದೇ ಸಂಘ ಅಥವಾ ಸಂಘಟನೆಗಳಿಂದ ಹೊರತಾದ ಅಸಂಘಟಿತ ವಲಯದಲ್ಲಿ ದುಡಿಮೆಗಾರರು ಅತೀ ಹೆಚ್ಚು ಶೋಷಣೆಗೆ ಈಡಾಗುತ್ತಾರೆ. ಇವರಿಗೆ ಸ್ವಾತಂತ್ರ್ಯ ಸ್ವಾಯುತ್ತತೆ ಇಲ್ಲದಿರುವುದರಿಂದ ತಮ್ಮ ಒಲವು , ನಿಯಮಗಳನ್ನು ಪ್ರತಿಷ್ಟಾಪಿಸಲು ಅಥವಾ ಹಕ್ಕು ಚಲಾಯಿಸಲು ಸಾಧ್ಯವಾಗದ ಕಾರ್ಮಿಕರನ್ನು ಫ್ಲೆಕ್ಷಿಬಲ್ ಲೇಬರ್ ಎನ್ನುತ್ತಾರೆಂದು ಅಭಿಪ್ರಾಯವಿದೆ. ಯಾವ ದುಡಿಮೆಯಲ್ಲಿ ಒಂದೇ ಉದ್ದೇಶಕ್ಕಾಗಿ ಒಗ್ಗೂಡಿ ತಮ್ಮ ಹಿತಾಸಕ್ತಿಗಳನ್ನು ಪೂರೈಸಿ ಕೊಳ್ಳಲು ಸಾಧ್ಯವಿಲ್ಲವೋ ಅವೆಲ್ಲವೂ ಅಸಂಘಟಿತ ವಲಯಗಳು ಎಂದು ಕಾರ್ಮಿಕ ಆಯೋಗ ಅಸಂಘಟಿತ ವಲಯವನ್ನು ವ್ಯಾಖ್ಯಾನಿಸಿದೆ.

ಕಾರ್ಮಿಕ ಸಂಘಗಳು ಸದಸ್ಯತ್ವವನ್ನು ಪಡೆದಿರುವ ಕಾರ್ಮಿಕರನ್ನು ಸಂಘಟಿತ ಕಾರ್ಮಿಕರು ಎಂದು ಪರಿಗಣಿಸಲಾಗಿದೆ.

ಯಾವುದೇ ಸಂಘಟನೆಗೆ ಒಳಪಡದೆ ಕೈಗಾರಿಕೆಗಳಲ್ಲಿ ದುಡಿಯುವ ಕಾರ್ಮಿಕರು ಅಸಂಘಟಿತ ಕಾರ್ಮಿಕರಾಗಿರುತ್ತಾರೆ . ಇವರು ಗುಡಿ ಕೈಗಾರಿಕೆಗಳಲ್ಲಿ ಉದ್ಯೋಗಿಗಳಾಗಿದ್ದು ಇವರಿಗೆ ಉದ್ಯೋಗದಲ್ಲಾಗಲೀ ಅಥವಾ ಇನ್ನು ಯಾವುದೇ ರೀತಿಯಲ್ಲಿ ಭದ್ರತೆ ಇರುವುದಿಲ್ಲ. ಈ ಕಾರ್ಮಿಕರ ಶೋಷಣೆ ಅಧಿಕವಾಗಿದ್ದು ಇವರು

ಅತಂತ್ರ ಸ್ಥಿತಿಯ ಬದುಕನ್ನು ನಡೆಸುತ್ತಾರೆ. ಇವರ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನ ಕಡಿಮೆ ಇದ್ದು ಇವರಿಗೆ ಶೋಷಣೆಯ ವಿರುದ್ಧ ಹೋರಾಡುವ ಸಾಮಾರ್ಥ್ಯವೂ ಕಡಿಮೆಯಾಗಿದೆ. ಆದುದರಿಂದ ಅಸಂಘಟಿತ ಕೈಗಾರಿಕಾ ಕಾರ್ಮಿಕರನ್ನು ಕೈಗಾರಿಕ ಕಾರ್ಮಿಕರೆಂದು ಪರಿಗಣಿಸಲಾಗುವುದಿಲ್ಲ, ಅಸಂಘಟಿತ ಕಾರ್ಮಿಕರ ಶೋಷಣೆ ಹೆಚ್ಚಾಗಿದ್ದು ಅವರ ಜೀವನ ಮಟ್ಟವು ಕಡಿಮೆಯಿರುತ್ತದೆ.

ಅಸಂಘಟಿತ ವಲಯದಲ್ಲಿ ಕಾರ್ಮಿಕರು ಹೆಚ್ಚಿನ ಶೋಷಣೆಗೆಗೆ ಒಳಗಾಗುವುದರಿಂದ ಇವರಿಗೆ ಯಾವುದೇ ರೀತಿಯ ಹೆಚ್ಚಿನ ಸೌಲಭ್ಯಗಳು ದೊರಕುವುದಿಲ್ಲ. ಇಲ್ಲಿ ಕಾರ್ಮಿಕರು ಮತ್ತು ಮಾಲಿಕರ ನಡುವೆ ಯಾವುದೇ ರೀತಿಯ ಶಾಸನಬದ್ಧ ಒಪ್ಪಂದವಿರುವುದಿಲ್ಲ. ಹಾಗೂ ಸರಕಾರದ ಹಸ್ತಕ್ಷೇಪವಿರುವುದಿಲ್ಲ. ಇಲ್ಲಿ ಕೆಲಸದ ಅವಧಿ, ವೇತನ ಇತ್ಯಾದಿಗಳು ಯಾವುದೇ ರೀತಿಯ ಕಾರ್ಮಿಕ ಸಂಘಗಳ ನಿಯಂತ್ರಣದಲ್ಲಿರುವುದಿಲ್ಲ. ಈ ವಲಯದ ಜನರಿಗೆ ಯಾವುದೇ ರೀತಿಯ ಸಾಮಾಜಿಕ ಭದ್ರತೆ, ವಿಮಾ ಸೌಲಭ್ಯ ಇತ್ಯಾದಿಗಳು ಇರುವುದಿಲ್ಲ. ಇಲ್ಲಿ ದುಡಿಯುವರ ಸಂಖ್ಯೆಯನ್ನು ಸರಿಯಾಗಿ ಲೆಕ್ಕ ಹಾಕಲು ಸಾಧ್ಯವಿಲ್ಲ. ಏಕೆಂದರೆ ಇವರು ಯಾವುದೇ ಓರ್ವ ಮಾಲಿಕನ ಕೈಕೆಳಗೆ ಅಥಾವ ಒಂದು ಉದ್ಯೋಗದಲ್ಲಿ ಶಾಶ್ವತವಾಗಿ ನೆಲೆ ನಿಲ್ಲುವುದಿಲ್ಲ. ಅಲ್ಲದೆ ವರ್ಷಪೂರ್ತಿ ಉದ್ಯೋಗದಲ್ಲಿ ತೊಡಗಿರುವುದಿಲ್ಲ. ಅಸಂಘಟಿತ ವಲಯದಲ್ಲಿ ದುಡಿಯುವವರ ಸ್ಥಾನಮಾನ ಮತ್ತು ಜೀವನ ಮಟ್ಟವು ಕಡಿಮೆಯಾಗಿರುತ್ತದೆ. ಅಲ್ಲದೆ ಅವರು ಕೂಲಿ, ಹೆಚ್ಚು ಅವಧಿಯ ಕೆಲಸ, ಉದ್ಯೋಗ ಖಾತರಿಯಿಲ್ಲದಿರುವಿಕೆ ಮುಂತಾದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇಲ್ಲಿ ಮಾಲೀಕರು ಪಡೆಯುವ ಲಾಭ ಅಧಿಕವಾಗಿದ್ದು ಕಾರ್ಮಿಕರಿಗೆ ದೊರಕುವ ಪ್ರತಿಫಲವು ಕಡಿಮೆಯಾಗಿರುತ್ತದೆ.

ನಮ್ಮ ದೇಶದಲ್ಲಿರುವ ಆದಾಯ ಮತ್ತು ಸಂಪತ್ತಿನ ಹಂಚುವಿಕೆಯಲ್ಲಿರುವ ಅಸಮಾನತೆಯನ್ನು ಹೋಗಲಾಡಿಸುವುದಕ್ಕೆ ಅಸಂಘಟಿತ ಕಾರ್ಮಿಕರಿಗೂ ಸೂಕ್ತ ಉದ್ಯೋಗ ರಕ್ಷಣೆ ಮತ್ತು ಸಾಮಾಜಿಕ ಭದ್ರತೆಯನ್ನು ಕೊಡುವುದು ಅಗತ್ಯವಾಗಿದೆ. ಆಗ ಮಾತ್ರ ಭಾರತದಂತಹ ರಾಷ್ಟ್ರವು ಮುಂದವರಿಯಲು ಸಾಧ್ಯ.. ೨೦೧೧ ರ ಜಣಗಣತಿಯ ಪ್ರಕಾರ ಅಸಂಘಟಿತ ವಲಯವನ್ನು ೯ ಪ್ರಕಾರದ ಉದ್ಯೋಗಿಗಳಾಗಿ ವಿಂಗಡಿಸಿದ್ದು ಅವುಗಳ ವಿವರ ಈ ಕೆಳಗಿನಂತಿದೆ.

೧. ಸಾಗುವಳಿದಾರರು, ಗದ್ದೆಯನ್ನು ಊಳುವವರು.

೨. ಕೃಷಿ ಕಾರ್ಮಿಕರು, ಅಕ್ಕಿ, ಗೋದಿ ಇತ್ಯಾದಿಗಳನ್ನುಬೆಳೆಸುವವರು.

೩. ಗುಡಿ, ಕೈಗಾರಿಕೆ, ಹೈನು ಕೈಗಾರಿಕೆ, ಅರಣ್ಯ ಗಾರಿಕೆ, ತೋಟಗಾರಿಕೆ, ಮಡಿಕೆ ತಯಾರಿಕೆ, ಬುಟ್ಟಿ ತಯಾರಿಕೆ, ಹಾಲು ಉತ್ಪಾದನೆ, ಜೇನು ಮುಂತಾದ ಅರಣ್ಯದಲ್ಲಿ ದೊರೆಯುವ ವಸ್ತುಗಳು ಸೇಬು, ಚಹಾ, ಕಾಫಿ ಇತ್ಯಾದಿ.

೪. ಕುಟುಂಬ ಸಂಬಂಧಿ ಕೈಗಾರಿಕೆ, ತಿಂಡಿ ತಯಾರಿಸುವಿಕೆ,

೫. ಕಟ್ಟಡ ನಿರ್ಮಾಣ

೬. ವ್ಯಾಪರ, ವಾಣಿಜ್ಯ, ಬಟ್ಟೆ ಅಂಗಡಿಗಳು, ದಿನಸಿ ಅಂಗಡಿಗಳು ಇತ್ಯಾದಿ

೭. ಸಾರಿಗೆ ಸಂಪರ್ಕ

೮. ಇತರೆ.

ಈ ಪಟ್ಟಿಯಲ್ಲಿ ಮೊದಲಿನೆರಡು ಕೃಷಿ ಸಂಬಂಧಿ ಚಟುವಟಿಕೆಗಳು ಉಳಿದವುಗಳು ಕೃಷಿಯೇತರವಾದವುಗಳು. ಇತರೆ ಅಧ್ಯಯನಗಳ ಪ್ರಕಾರ ಇನ್ನೂ ಅನೇಕ ಉದ್ಯೋಗಗಳು ಈ ವಲಯಕ್ಕೆ ಸೇರುತ್ತದೆ. ಸಾಂಪ್ರದಾಯಿಕ ಹಾಗೂ ಆಧುನಿಕ ಎರಡೂ ರೀತಿಯ ದುಡಿಮೆಗಳನ್ನು ಹೀಗೆ ಗುರುತಿಸಲಾಗಿದೆ.

ಕೃಷಿ, ಹೈನುಗಾರಿಕೆ, ಪಶುಪಾಲನೆ, ಮೀನುಗಾರಿಕೆ, ಕರಕುಶಲ ವಸ್ತುಗಳ ತಯಾರಿಕೆ, ಕೈ ಮಗ್ಗದ ಕೆಲಸ, ಕಟ್ಟಡ ನಿರ್ಮಾಣ, ಬೆಂಕಿ ಪೊಟ್ಟಣ ತಯಾರಿಕೆ, ಮನೆಗಳಲ್ಲಿ ಬಿದಿರು ಬುಟ್ಟಿ ತಯಾರಿಕೆ, ಬಟ್ಟೆ ಹೊಲಿಯುವುದು, ಸಿದ್ಧ ಉಡುಪು ತಯಾರಿಕೆ, ಮನೆಗಳಲ್ಲಿ ಕಸಮುಸುರೆ ಹಾಗೂ ಬಟ್ಟೆ ತೊಳೆಯುವ ಆಳುಗಳಾಗಿ, ಹಂಗಾಮಿ ಅಥಾವ ದಿನಗೂಲಿ,ನೌಕರಿ, ಚಿಲ್ಲರೆ ವ್ಯಾಪಾರ, ತಲೆ ಮೇಲೆ ಹೊತ್ತು ಮಾರುವುದು ಮತ್ತು ಆಹಾರ ಸಂಸ್ಕರಣೆ ಇತ್ಯಾದಿಗಳು.

ಆರ್ಥಿಕ ಅಭಿವೃದ್ಧಿಯಲ್ಲಿ ಅಸಂಘಟಿತ ವಲಯವು ಬಹುಮಖ್ಯ ಪಾತ್ರ ವಹಿಸಿದೆ. ಅದರಲ್ಲಿಯೂ ಅಭಿವೃದ್ಧಿ ಹೊಂದುತ್ತಿರುವ ದೇಶದ ೧/೩ ಆದಾಯವು ಈ ಅಸಂಘಟಿತವಲಯದಿಂದಲೇ ಬರುತ್ತಿದೆ. ಅಸಂಘಟಿತವಲಯದಿಂದ ನಿರುದ್ಯೋಗ ಸಮಸ್ಯೆಯು ಕಡಿಮೆಯಾಗಿದೆ. ಇದರಲ್ಲಿ ಮಾಲಿಕರು ಲಾಭಕ್ಕಿಂತ ತಮ್ಮ ಜೀವನಕ್ಕೆ ಬೇಕಾದ ಅಗತ್ಯತೆಗಳ ಬಗ್ಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುತ್ತಾರೆ. ಉದಾಹರಣೆಗೆ ಮಕ್ಕಳ ವಿಧ್ಯಾಭ್ಯಾಸಕ್ಕೆ ಕೌಟುಂಬಿಕ ಸಮಸ್ಯೆಗಳಿಗೆ ಇಲ್ಲಿ ಸಂಘಟಿತ ವಲಯದ  ಸುಮಾರು ೧೨-೧೪ ಶೇಕಡಾ ವಾರ್ಷಿಕ ಆದಾಯವನ್ನು ಕೊಟ್ಟರೆ ಅಸಂಘಟಿತ ವಲಯವು ೩೦ ಶೇಕಡಾ ವಾರ್ಷಿಕ ಆದಾಯವನ್ನು ಕೊಡುತ್ತದೆ.ಈ ವಲಯವು ಪ್ರಾಮುಖ್ಯವನ್ನು ಪಡೆಯಲು ಕಾರಣವೇನಂದರೆ ಉದ್ಯೋಗಾವಕಾಶವನ್ನು ಸಾಕಷ್ಟು ಜನರಿಗೆ ದೇಶದಲ್ಲಿ ಒದಗಿಸುವ ಮೂಲಕ ಮತ್ತು ರಾಷ್ಟ್ರೀಯ ಉತ್ಪಾದನೆಯಲ್ಲಿ ಮಹತ್ವದ ಕಾರ್ಯವನ್ನು ಮಾಡುತ್ತಿದೆ. ಅಸಂಘಟಿತ ವಲಯದ ಕೊಡುಗೆಯು ನೆಟ್ ಡೊಮೆಸ್ಟಿಕ್ ಪ್ರೊಡಕ್ಟ್ ಮತ್ತು ಅದರ ಪಾಲು ಒಟ್ಟು ಪ್ರಸ್ತುತ ಬೆಲೆಯ ೬೦% ಗಿಂತ ಅಧಿಕವಾಗಿದೆ. ಇನ್ನೂ ಉಳಿತಾಯದಲ್ಲಿ ಅದರ ಪಾಲು ೩/೪ ಅಸಂಘಟಿತ ವಲಯದಿಂದ ಬರುತ್ತಿದೆ. ಸಮಾಜದ ರಾಷ್ಟ್ರದ ಅಭಿವೃದ್ಧಿಯಲ್ಲಿ ಅಸಂಘಟಿತ ವಲಯವು ಬಹುಮುಖ್ಯ ಪಾತ್ರವನ್ನು ವಹಿಸಿದೆ. ಜನರಿಗೆ ಉದ್ಯೋಗವನ್ನು ಕಲ್ಪಿಸಿರುವುದರಿಂದ ಅವರ ಜೀವನ ಮಟ್ಟವು ಉತ್ತಮ ವಾಗುತ್ತದೆ.ಇದರಿಂದ ರಾಷ್ಟ್ರದ ಆದಾಯ ಜಾಸ್ತಿಯಾಗಿ ಅಭಿವೃದ್ಧಿ ಸಾಧಿಸಲು ಸುಲಭವಾಗುತ್ತದೆ.

ರಾಷ್ಟ್ರೀಯ ಕೂಲಿ ನೀತಿಯಲ್ಲಿ ವಿಭಿನ್ನ ವರ್ಗಗಳ ಹಿತಾಸಕ್ತಿಯನ್ನು ಸಮತೋಲನಗೊಳಿಸುವುದು ಮತ್ತು ಅವುಗಳನ್ನು ಸಾಧ್ಯವಿರುವಷ್ಟು ಮಟ್ಟಿಗೆ ರಾಷ್ಟೀಯ ಹಿತಾಸಕ್ತಿಗಳೊಂದಿಗೆ ಹೊಂದಿಕೊಳ್ಳುವಂತೆ ಮಾಡುವುದು ಹೀಗೆ ಆರ್ಥಿಕತೆಯಲ್ಲಿನ ಎಲ್ಲಾ ಬಗೆಯ ಕೂಲಿ ಪಾವತಿಗಳ ಮೇಲೆ ಶಿಸ್ತನ್ನು ವಿಧಿಸುವ ಉದ್ಧೇಶ ಹೊಂದಿದೆ. ಈ ಮೂಲಕ ಹೆಚ್ಚುವರಿ, ಕಡಿಮೆ ಅಥವಾ ಅಸಮಂಜಸವಾಗಿ ಕೂಲಿ ಪಾವತಿಸುವುದು ದೇಶದ ರಾಷ್ಟೀಯ ಅಬಿವೃದ್ಧಿ ಉದ್ಧೇಶಗಳಿಗೆ – ಸಾಮಾಜಿಕ ಮತ್ತು ಆರ್ಥಿಕ ಅಡ್ಡಿಯಾಗುವುದನ್ನು ತಪ್ಪಿಸುವುದಾಗಿದೆ. ಕೆ. ಎಸ್. ಸುಬ್ರಮಣ್ಯ. ಸಾಮಾನ್ಯವಾಗಿ ಕಾರ್ಮಿಕರನ್ನು ಪರಿಣತಿ ಹೊಂದಿರುವ ಕಾರ್ಮಿಕರು ಅಸಂಘಟಿತರಾಗಿದ್ದಾರೆ. ಪರಿಣತಿ ಹೊಂದಿದ ಕಾರ್ಮಿಕರು ಸಂಘಟಿತ ಮತ್ತು ಅಸಂಘಟಿತ ಸ್ವರೂಪ ಹೊಂದಿರುವುದನ್ನು ಭಾರತದಾದ್ಯಂತ ನಾವು ಕಾಣುತ್ತೇವೆ ಭಾರತವು ಕೃಷಿ ಪ್ರಧಾನವಾದ ದೇಶವಾಗಿದೆ. ಇಲ್ಲಿ ಸಂಘಟಿತ ವರ್ಗದ ಕಾರ್ಮಿಕರು ಅಸಂಘಟಿತ ವರ್ಗದ ಕಾರ್ಮಿಕರಿಗಿಂತ ಕಡಿಮೆ ಪ್ರಮಾಣದಲ್ಲಿ ಇದ್ದಾರೆ. ಅಸಂಘಟಿತ ವಲಯದ ಕಾರ್ಮಿಕರ ಸಂಖ್ಯೆಯಲ್ಲಿ ಗಣನೀಯ ಪ್ರಮಾಣದಲ್ಲಿರುವುದರಿಂದ ಅಸಂಘಟಿತ ವಲಯದ ಬಗ್ಗೆ ಅದರ ಉಗಮ, ಪ್ರಾಮುಖ್ಯತೆ ಗುಣಲಕ್ಷಣಗಳು, ಕೊಡುಗೆ, ಸಮಸ್ಯೆಗಳು ಅಸಂಘಟಿತ ಮತ್ತು ಸಂಘಟಿತ ವಲಯದ ವ್ಯತ್ಯಾಸಗಳನ್ನು ತಿಳಿಯಲು ಸಾಧ್ಯವಾಗುತ್ತದೆ.

ಭಾರತದಂತ ವಿಕಾಸಶೀಲ ದೇಶಗಳಲ್ಲಿ ಕಾರ್ಮಿಕರ ಸ್ಥಿತಿಗತಿ ಅಷ್ಟೇನೂ ಉತ್ತಮವಾಗಿಲ್ಲ. ಈ ವಿಕಾಸಶೀಲ ದೇಶಗಳಲ್ಲಿ ಆರ್ಥಿಕೆಯನ್ನು ಸಂಘಟಿತ ಮತ್ತು ಅಸಂಘಟಿತ ಕ್ಷೇತ್ರಗಳೆಂದು ವರ್ಗೀಕರಿಸುವುದು ವಾಡಿಕೆ. ಸಂಘಟಿತ ಕ್ಷೇತ್ರದಲ್ಲಿ ದುಡಿಯುತ್ತಿರುವ ಕಾರ್ಮಿಕರ ಸ್ಥಿತಿಗತಿ ಪರವಾಗಿಲ್ಲ ಆದರೆ ಅಸಂಘಟಿತ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಕಾರ್ಮಿಕರ ಸ್ಥಿತಿಯು ಹೀನಾಯವಾಗಿದೆ, ಅವರು ಶೋಷಣೆಗೆ ಒಳಗಾಗಿದ್ದಾರೆ. ಅಸಂಘಟಿತ ಕ್ಷೇತ್ರದ ಉದ್ಯಮಗಳು ಸರಕಾರಕ್ಕೆ ತೆರಿಗೆಯನ್ನು ಪಾವತಿಸುವುದಿಲ್ಲ. ಅಸಂಘಟಿತ ಕ್ಷೇತ್ರದಲ್ಲಿ ಕಾರ್ಮಿಕ ಕೂಲಿ ಮತ್ತು ಇತರೆ ಪಾವತಿಗಳಿಗೆ ಸಂಭಂಧಿಸಿದಂತೆ ಅಸಂಘಟಿತ ಕ್ಷೇತ್ರದ ಉತ್ಪಾದಕರು ಸರಕಾರ ರೂಪಿಸಿದ ಕಾರ್ಮಿಕ ಕಲ್ಯಾಣ ನೀತಿಯನ್ನು ಅನುಸರಿಸುವುದಿಲ್ಲ. ಅಸಂಘಟಿತ ವಲಯದಲ್ಲಿ ಕೂಲಿ ವ್ಯತ್ಯಯಗಳಿವೆ. ಅಸಂಘಟಿತ ಕ್ಷೇತ್ರದುದ್ಯಮಗಳು ಲಿಂಗ ತಾರತಮ್ಯವನ್ನು ವ್ಯಾಪಕವಾಗಿ ಅನುಸರಿಸುತ್ತವೆ. ಅಸಂಘಟಿತ ವಲಯದಲ್ಲಿ ಸರಕಾರದ ಕನಿಷ್ಟ ಕೂಲಿ ಕಾಯಿದೆ ಜಾರಿಗೊಳ್ಳುತ್ತಿಲ್ಲ . ಈ ಕಾಯಿದೆಗಳನ್ನು ಮಾಧ್ಯಮಗಳು ಸಂಪೂರ್ಣವಾಗಿ ಉಳ್ಳಂಘಿಸುತ್ತಿದ್ದರೂ ಕಾರ್ಮಿಕ ಕಲ್ಯಾಣ ಇಲಾಖೆ ಯಾವುದೇ ಕ್ರಮ ತೆಗೆದುಕೊಳ್ಳುತ್ತಿಲ್ಲ.

೧೯೫೦ರ ಮಧ್ಯಭಾಗದಲ್ಲಿ ಡಬ್ಲ್ಯೂ ಆರ್ಥರ್ ಲೆವಿಸ್‌ನ ಸಿದ್ಧಾಂತದ ಪ್ರಕಾರ ಅಭಿವೃದ್ಧಿಯನ್ನು ಹೊಂದುತ್ತಿರುವ ದೇಶದಲ್ಲಿ ಕಾರ್ಮಿಕರ ಸಂಖ್ಯೆಯು ಅಧಿಕವಾಗಿರುತ್ತದೆಯಲ್ಲದೆ ಅದು ಕೈಗಾರಿಕೆಯ ಬೆಳವಣಿಗೆಗೆ ಪೂರಕವೂ ಆಗಿದೆ. ಇದರಿಂದ ಅಭಿವೃದ್ಧಿ ಹೊಂದಿರುವ ದೇಶಗಳು ಬೆಳೆಯಲು ಸಾಧ್ಯವಾಯಿತು ಎಂದು ತಿಳಿಸುತ್ತಾರೆ. ಆದುದರಿಂದ ಸಣ್ಣ ವ್ಯಾಪಾರಿಗಳು ಸಣ್ಣ ಉತ್ಪಾದಕಕರು ಮತ್ತು ಸಾಂದರ್ಭಿಕ ಉದ್ಯೋಗಗಳನ್ನು

ಒಳಗೊಂಡಿರುವ ಸಾಂಪ್ರದಾಯಿಕ ಕ್ಷೇತ್ರದಲ್ಲಿ ಅಂತಿಮವಾಗಿ ಆರ್ಥಿಕವಾಗಿ ಲೀನವಾಯಿತು ಹಾಗೂ ಮರೆಯಾಗುತ್ತದೆ ಎಂದು ಒಪ್ಪಿಕೊಳ್ಳಲಾಯಿತು. ಈ ವಾದವನ್ನು ೧೯೭೦ರಲ್ಲಿ ಕಡೆಗಣಿಸಲಾಯಿತು ಯಾಕೆಂದರೆ ಒಂದು ಕೇಸ್ ಸ್ಟಡಿಯಲ್ಲಿ ಅಸಂಘಟಿತ ವಲಯದ ಪ್ರಪಂಚದ ವಿವಿಧ ಭಾಗಗಳಲ್ಲಿ ಪುರಷರು, ಅವಿಧ್ಯಾವಂತರಾಗಿದ್ದಾರೆ. ಇಂತವರು ತಮ್ಮ ಜೀವನದ ಅಗತ್ಯತೆಗಳನ್ನು ಈಡೇರಿಸಲು ಅಸಂಘಟಿತ ವಲಯದ ಪ್ರಾಮುಖ್ಯತೆಯನ್ನು ಕೆಳಗೆ ವಿವರಿಸಲಾಗಿದೆ. ಇಲ್ಲಿ ಕೆಲಸಕ್ಕೆ ಸುಲಭವಾಗಿ ಸೇರಲೂ ಬಹುದು ಮತ್ತು ಬಿಡಲೂ ಬಹುದು., ಹೂಡಿಕೆಯ ಪ್ರಮಾಣವು ತುಂಬಾ ಕಡಿಮೆಯಾಗಿ ಇರುತ್ತದೆ. ಇಲ್ಲಿ ಕಾರ್ಮಿಕರು ಮತ್ತು ಹೂಡಿಕೆಯ ನಡುವೆ ವ್ಯತ್ಯಾಸವಿರುವುದಿಲ್ಲ. ಯಾವುದೇ ರೀತಿಯ ಶಿಕ್ಷಣ ಅಥವಾ ತರಬೇತಿಯ ಅವಶ್ಯಕತೆಯು ಇರುವುದಿಲ್ಲ, ಮಾಲೀಕರ ಮತ್ತು ಕಾರ್ಮಿಕರ ಸಂಬಂಧವು ಲಿಖಿತರಹಿತ ಮತ್ತು ಅಸಂಘಟಿತ ಅಂದರೆ ಇಲ್ಲಿ ಯಾವುದೇ ಹಕ್ಕುಗಳು ಇರುವುದಿಲ್ಲ. ಉದಾಹರಣೆಗೆ ಪಿ.ಎಫ್. ಇ.ಎಫ್.ಐ ಇತ್ಯಾದಿ, ಕಾರ್ಮಿಕರಿಗೆ ಯಾವುದೇ ರೀತಿಯ ಹಕ್ಕುಗಳ ಬಗ್ಗೆ, ಸಂಘಟನನೆಗಳ ಬಗ್ಗೆ ಮಾಹಿತಿ ಇರುವುದಿಲ್ಲ, ಕಡಿಮೆ ವೇತನ ಸಂಘಟಿತ ವಲಯದ ಕಾರ್ಮಿಕರಿಗೆ ಹೋಲಿಸಿದಾಗ ತೀರಾ ಕಡಿಮೆ ವೇತನವನ್ನು ಪಡೆಯುತ್ತಾರೆ ಈ ವಲಯದಲ್ಲಿ ದುಡಿಯುವವರು ಕಾಯಿಲೆ, ಅಪಘಾತ, ಯಾವುದೇ ರಕ್ಷಣೆ ಇಲ್ಲದೆ ದುಡಿಯಬೇಕು, ಅಸಂಘಟಿತ ವಲಯದಲ್ಲಿ ಯಾವುದೇ ರೀತಿಯ ಉದ್ಯೋಗದ ಭರವಸೆ ಇರುವುದಿಲ್ಲ, ಅಸಂಘಟಿತ ವಲಯವು ಹಲವು ಕ್ಷೇತ್ರಗಳಲ್ಲಿ ಇರುವುದರಿಂದ ತಮ್ಮೊಳಗೆ ತೀವ್ರ ಸ್ಪರ್ಧೆಯನ್ನು ಎದುರಿಸುತ್ತಾರೆ.

## ಸಾಹಿತ್ಯ ಸಮೀಕ್ಷೆ

**ಜೆ.ಡಿ.ಅಗರ್‌ವಾಲ್** ರವರ ಅಭಿಪ್ರಾಯದಂತೆ ಕಾರ್ಮಿಕರ ಅರ್ಥ, ಬೇಡಿಕೆ ಮತ್ತು ಪೂರೈಕೆಯ ಲಕ್ಷಣಗಳನ್ನು ಕಾರ್ಮಿಕರ ಬೆಳವಣಿಗೆ, ಸಮಾಜದಲ್ಲಿ ಕಾರ್ಮಿಕರ ಸ್ಥಾನಮಾನ ,ಕಾರ್ಮಿಕರ ಕಟುಂಬಗಳ ಜೀವನಮಟ್ಟ ಸಂಘಟನೆ, ರಾಜ್ಯ ನೀತಿ, ಕನಿಷ್ಟ ಕೂಲಿಯ ನಿರ್ಧಾರ ಮತ್ತು ಸಲಹೆಗಳನ್ನು ವಿವರಣಾತ್ಮಕವಾಗಿ ವಿಂಗಡಿಸಿದ್ದಾರೆ. ಇವರ ಪ್ರಕಾರ ಅಸಂಘಟಿತ ಕಾರ್ಮಿಕರು ಕೂಲಿಗಾಗಿ ಮತ್ತು ಸಣ್ಣ ಭೂ ಹಿಡುವಳಿಯನ್ನು ಹೊಂದಿದವರು ಕಾರ್ಮಿಕರಾಗಿದ್ದಾರೆ. ಕಾರ್ಮಿಕರ ಪೂರೈಕೆ ಮತ್ತು ಬೇಡಿಕೆಯ ಋತುಮಾನದಲ್ಲಿ ಹೆಚ್ಚಿಗೆ ಇರುತ್ತದೆ. ಅಧಿಕ ಜನಸಾಂದ್ರತೆ ಇರುವ ಪ್ರದೇಶದಲ್ಲಿ ಕಾರ್ಮಿಕರ ಪೂರೈಕೆಯು ಹೆಚ್ಚು ಇರುತ್ತದೆ. ಕಡಿಮೆ ಜನಸಾಂದ್ರತೆ ಇರುವ ಪ್ರದೇಶದಲ್ಲಿ ಕಡಿಮೆ ಅಥವಾ ಸಮತೋಲನವಿರುತ್ತದೆ. ಅಸಂಘಟಿತ ಕಾರ್ಮಿಕರು ಹಿಂದುಳಿದ ಜನಾಂಗದವರಾಗಿದ್ದು ಇವರ ಗಳಿಕೆಯನ್ನು ಕೈಗಾರಿಕೆಯ ಕಾರ್ಮಿಕರ ಗಳಿಕೆಗೆ ತುಲಾನಾತ್ಮಕವಾಗಿ ಅಧ್ಯಯನ ಮಾಡಿದ್ದಾರೆ. ಆದಾಯ ಮತ್ತು ಕೆಲಸದ ನಿಯಮಗಳನ್ನು ನಿರ್ಧರಿಸಿದಾಗ ಮಾತ್ರ ಕಾರ್ಮಿಕರ ಜೀವನ ಮಟ್ಟ ಮತ್ತು ಕೂಲಿಯನ್ನು ಹೆಚ್ಚಿಸಬಹುದು ಎಂದು ಸಲಹೆ ನೀಡಿದ್ದಾರೆ. ಹೀಗೆ ಹಲವಾರು ರೀತಿಯಲ್ಲಿ ಅಸಂಘಟಿತ

ಕಾರ್ಮಿಕರ ಸಮಸ್ಯೆಗಳನ್ನು ಕುರಿತು ಡಾ.ಅಗರವಾಲ್ ಮತ್ತು ಪಿ.ಸಿ.ಬನ್‌ಸಿಲ್ ರವರು ತಮ್ಮ ಗ್ರಂಥದಲ್ಲಿ ವ್ಯಕ್ತಪಡಿಸಿದ್ದಾರೆ.

**ಈಶ್ವರ ಸಿ ಡಿಂಗ್ರಾ** ಇವರ ಅಭಿಪ್ರಾಯದ ಪ್ರಕಾರ ಕಟ್ಟಡ ಕಾರ್ಮಿಕರು ಅಸಂಘಟಿತರು, ಅಶಿಕ್ಷಿತರು ,ತಿಳುವಳಿಕೆ ಇಲ್ಲದವರೂ, ರಾತ್ರಿ ಹಗಳು ದುಡಿದು ಒಂದೇ ತರಹದ ಅಂದರೆನಿಗಧಿತ ವೇತನ ಪಡೆದು ಋತುಮಾನದಲ್ಲಿ ವಲಸೆ ಹೋಗಿ ಕೆಲಸ ಮಾಡುವವರು. ಅಸಂಘಟಿತ ಕಾರ್ಮಿಕರಿಗೆ ಸಂಪೂರ್ಣವಾದ ಮತ್ತು ತೃಪ್ತಿದಾಯಕವಾದ ಕೆಲಸದ ಅಭಾವವಿರುವುದರಿಂದ ಇವರು ಅರೆ ನಿರುದ್ಯೋಗಿಗಳಾಗಿರುವರು. ಕೆಲಸದ ನಿಯಮ ಮತ್ತು ಅವಧಿಯ ಬಗ್ಗೆ ಇವರು ಅರಿತಿರುವುದಿಲ್ಲ, ಕಾರ್ಮಿಕರ ಪೂರೈಕೆಯು ಬೇಡಿಕೆಗಿಂತ ಹೆಚ್ಚು ಇರುತ್ತದೆ ಎಂಬುದು ಲೇಖಕರ ಅಭಿಪ್ರಾಯವಾಗಿದೆ. ಕನಿಷ್ಟ ಕೂಲಿ ಕಾಯ್ದೆ, ವಿಶೇಷ ಪ್ರದೇಶದ ಕಾರ್ಯಕ್ರಮ ,ಭೂ ಮರುಹಕ್ಕು ಮತ್ತು ವಸತಿ, ಗ್ರಾಮೀಣ ಉದ್ಯೋಗ, ಜೀತಪದ್ದತಿಯ ನಿರ್ಮೂಲನ ಮತ್ತು ಹಿಂದುಳಿದ ಜನರಿಗೆ ಹಣಕಾಸಿನ ಸಹಾಯ, ಹೀಗೆ ಹಲವಾರು ರೀತಿಯ ಸರಕಾರದ ಸಲಹೆ ಮತ್ತು ಅಭಿವೃದ್ದಿಯ ಕಾರ್ಯಕ್ರಮಗಳ ಬಗ್ಗೆ ತಮ್ಮ ಗ್ರಂಥದಲ್ಲಿ ವಿವರಿಸಿದ್ದಾರೆ.

**ಪಿ. ಸಿ. ಬನ್‌ಸಿಲ್** ರವರ ಅಭಿಪ್ರಾಯದ ಪ್ರಕಾರ ಅಸಂಘಟಿತ ಕಾರ್ಮಿಕರ ಲಕ್ಷಣಗಳು ಈ ಮೊದಲೇ ಹೇಳಿದ ಅರ್ಥಶಾಸ್ತ್ರಜ್ಞರಂತೆ ಇವರು ಕೂಡಾ ಇದೇ ರೀತಿಯ ಕಾರ್ಮಿಕರ ಲಕ್ಷಣಗಳನ್ನು ತಮ್ಮ ಗ್ರಂಥದಲ್ಲಿ ಬರೆದಿದ್ದಾರೆ, ಅಂದರೆ ಕಟ್ಟಡ ಕಾರ್ಮಿಕರು ಅಸಂಘಟಿತರು, ಅನಕ್ಷರಸ್ಥರು, ಕಡಿಮೆ ಕೂಲಿ, ನಿರ್ಧಿಷ್ಟವಿಲ್ಲದ ಕೆಲಸ, ಉದ್ಯೋಗದಾತನು ಮತ್ತು ಉದ್ಯೋಗದಾರನ ಸಂಬಂಧದಲ್ಲಿ ಕೈಗಾರಿಕೆ ಕಾರ್ಮಿಕರಂತೆ ಕಟ್ಟಡ ಕಾರ್ಮಿಕರ ಈ ಸಂಬಂಧವು ವಿವಿಧ ರೀತಿಯಲ್ಲಿ ಇರುವುದು. ಕೂಲಿಯ ವಿತರಣೆಯಲ್ಲಿ ಬಗೆ ಬಗೆಯಾಗಿರುತ್ತದೆ ಎಂಬುದು ಇವರ ಅಭಿಪ್ರಾಯ ಆಗಿರುತ್ತದೆ. ಅಗರ್ ವಾಲ್ ಮತ್ತು ಬನ್‌ಸಿಲ್ ಇಬ್ಬರೂ ಕೂಡಿ ಬರೆದ ಗ್ರಂಥದಲ್ಲಿರುವಂತಹ ಕಾರ್ಮಿಕರ ಬೇಡಿಕೆ ಮತ್ತು ಪೂರೈಕೆಯನ್ನು ಇವರೂ ಕೂಡಾ ತಮ್ಮ ಗ್ರಂಥದಲ್ಲಿ ಇದೇ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಕಾರ್ಮಿಕರ ಸಮಸ್ಯೆಗಳನ್ನು ಗುರುತಿಸದೇ ಸರಕಾರವು ಹಾಕಿಕೊಂಡ ಅಥವಾ ಕೈಗೊಂಡ ಕಾರ್ಯಕ್ರಮಗಳನ್ನು ಹಾಗೂ ಕಾಯ್ದೆಗಳನ್ನು ವಿವರಣಾತ್ಮಕವಾಗಿ ಮತ್ತು ಅರ್ಥಪೂರ್ಣವಾಗಿ ವಿಶ್ಲೇಷಿಸಿದ್ದಾರೆ.

**ರುದ್ರಾ ಅಶೋಕ** ಅವರು ತಮ್ಮ ಗ್ರಂಥದಲ್ಲಿ ಮಧ್ಯಮ ವರ್ಗ ಮತ್ತು ಮಾರ್ಕ್ಸ್ ಅರ್ಥಶಾಸ್ತ್ರಜ್ಞನು ಅಪೇಕ್ಷಿಸುವಂತೆ ಅಸಂಘಟಿತ ಕಾರ್ಮಿಕರ ಕಾರ್ಯ ಸಾಮರ್ಥ್ಯತೆ ಹಾಗೂ ಕಾರ್ಮಿಕರ ಮಿಗುತೆಯನ್ನು ಅದೃಶ್ಯವಾಗುವಂತೆ ಯೋಚಿಸಿದ್ದಾರೆ. ಪ್ರಸ್ತುತದಲ್ಲಿ ಆರ್ಥಿಕ ಸಂಶೋಧನೆಯ ಫಲಿತಾಂಶದ ಯಾವ ಮಾರ್ಗವನ್ನು ಕಾರ್ಯ ರೂಪದಲ್ಲಿ ತಂದಿದೆ ಎಂಬುದನ್ನು ವಿಸ್ತರಿಸಿ, ಕಾರ್ಮಿಕರ ನಡತೆಯನ್ನು ಅಥವಾ ವರ್ತನೆಯನ್ನು ಅರ್ಥೈಸದೆ ಬಲವಾಗಿ ಶ್ರೀಮಂತರು ಇವರ ಮೇಲೆ ಮಾಡುವ ದಬ್ಬಾಳಿಕೆಯನ್ನು ತಮ್ಮ ಗ್ರಂಥವಾದ ರಾಜಕೀಯ ಅರ್ಥಶಾಸ್ತ್ರದಲ್ಲಿ ಭಾರತದ ಅಸಂಘಟಿತ ವಲಯದ ಬಗ್ಗೆ ಅಧ್ಯಯನ ಮಾಡಿದ್ದಾರೆ.

**ಆರ್ಥರ್ ಲಿವೀಸ್ (೧೯೫೪)** ರ ಅಭಿಪ್ರಾಯದಂತೆ ಅಸಂಘಟಿತ ವಲಯದ ಪ್ರಾಮುಖ್ಯತೆ ಮತ್ತು ಅದರ ಅರಿವು ಜನರಿಗೆ ಉದ್ಯೋಗವನ್ನು ದೊರಕಿಸಿಕೊಟ್ಟಾಗ ಆಗುತ್ತದೆ. ಇದೇ ಆರ್ಥಿಕ ಅಭಿವೃದ್ಧಿಗೆ ಪೂರಕವಾಗಿರುತ್ತದೆ. ಹೆಚ್ಚಿನ ಎಲ್ಲಾ ಸಾಹಿತ್ಯ ಸಮೀಕ್ಷೆಗಳು ಐ.ಎಲ್.ಒ. ಮತ್ತು ವರ್ಲ್ಡ್‌ಬ್ಯಾಂಕ್‌ನ ಪ್ರಕಾರ ನಡೆದಿರುತ್ತದೆ. ಅಸಂಘಟಿತ ವಲಯವು ಪ್ರಸಕ್ತ ವರ್ತಮಾನದಲ್ಲಿ ಉತ್ತಮ ಸ್ಥಿತಿಯಲ್ಲಿದ್ದು ಇತರ ದೇಶಗಳೂ ಉದ್ಯೋಗಾವಕಾಶವನ್ನು ಒದಗಿಸುವ ಮಟ್ಟಕ್ಕೆ ಬೆಳೆದಿದೆ ಎಂದು ತಿಳಿಯಬಹುದು.

**ಐ.ಎಲ್.ಒ** ಅಭಿಪ್ರಾಯದಂತೆ ಅಸಂಘಟಿತ ವಲಯವು ನಿರ್ಬಂಧಿಸಲಾಗದ ಬೆಳವಣಿಗೆಯ ಅಗತ್ಯತೆಯನ್ನು ಪೂರೈಸುತ್ತದೆ. ಆರ್ಥಿಕ ವಲಯದ ಬದಲಾವಣೆಗೆ ಸ್ಥಿರತೆ ಮತ್ತು ಸಾಮರ್ಥ್ಯಗಳು ಮಾನದಂಡಗಳಾಗಿವೆ. ಇವುಗಳು ಅಸಂಘಟಿತ ಕ್ಷೇತ್ರದ ಪ್ರಾಮುಖ್ಯತೆಯನ್ನು ತಿಳಿಸುತ್ತದೆ ಎಂದು ಐ.ಎಲ್.ಒ. ಪ್ರಸ್ತುತಪಡಿಸುತ್ತದೆ.

**ಪೋರ್ಟಸ್ ಮತ್ತು ವಾಲ್ಟನ್** ರವರ ಅಭಿಪ್ರಾಯದಂತೆ ಅಸಂಘಟಿತ ವಲಯವು ಸಂಘಟಿತ ವಲಯವನ್ನು ಹೊರತುಪಡಿಸಿ ಆದಾಯ ಉತ್ಪಾದಿಸುವಂತಹ ಚಟುವಟಿಕೆಯಾಗಿದೆ. ಅಸಂಘಟಿತ ವಲಯದಲ್ಲಿ ಸ್ವ ಉದ್ಯೋಗದಲ್ಲಿರುವ ಕೆಲಸಗಾರರು ಅವರ ವಿಭಿನ್ನ ಕೆಲಸದ ಯೋಗ್ಯತೆ ಹಾಗೂ ವಿಭಿನ್ನ ಕಾರ್ಮಿಕ ಕಾನೂನುಗಳನ್ನು ಪಾಲಿಸುವಂತಾಗಿದೆ.ಅಸಂಘಟಿತ ವಲಯವು ಹೆಚ್ಚು ಗಂಟೆಗಳ ಕಾಲ ಕೆಲಸ ಮಾಡಿ, ಅಸ್ಥಿರ ವೇತನವನ್ನು ಪಡೆದು, ಸೌಕರ್ಯಗಳು ಸರಿಯಾಗಿಲ್ಲದಿದ್ದರೂ ಕಾರ್ಮಿಕರ ರಕ್ಷಣೆಗೆ ಯಾವುದೇ ಕಾನೂನುಗಳು ಇರದೆ ಇದ್ದ ಕಾರಣ ಅಸಂಘಟಿತ ವಲಯಗಳಾಗಿ ಉಳಿದುಕೊಂಡವು . ಯಾವುದೇ ರಾಜ್ಯದ ಕಾನೂನುಗಳು ಅಸಂಘಟಿತ ವಲಯದ ರಕ್ಷಣೆಗೆ ನಿಂತಿಲ್ಲ ಮತ್ತು ಲಿಂಗದ ಭೇದಭಾವ ಕೂಡಾ ಇರುವುದರಿಂದ ಇದರ ಲಕ್ಷಣ ಮತ್ತು ಪರಿಪೂರ್ಣವಾದ ಸಂಘಟನೆಯ ಕೊರತೆ ಇರುವುದನ್ನು ಲೇಖಕಕಾರರು ವಿವರಿಸಿದ್ದಾರೆ .

**ಜೋನ್ ವಿಕ್ಸ್(೧೯೭೫)** ಇವರ ಅಭಿಪ್ರಾಯದಂತೆ ಮುಂದುವರಿಯುತ್ತಿರುವ ಅರ್ಥಶಾಸ್ತ್ರದಲ್ಲಿ ಪಟ್ಟಣ ಪ್ರದೇಶದಲ್ಲಿರುವ ಉದ್ಯೋಗದ ಖಾಯಿದೆಯ ಬಗ್ಗೆ ತಿಳಿಸಿರುತ್ತಾರೆ. ಈ ಅಧ್ಯಾಯನದಲ್ಲಿ ಸಂಘಟನೆಯ ಸ್ಥಿತಿಗತಿ ಹಾಗೂ ರಾಜ್ಯದಲ್ಲಿ ತಲೆ ಎತ್ತುತ್ತಿರುವ ಕೈಗಾರಿಕೆಗಳು ವಿಭಿನ್ನವಾದ ಗುಣಲಕ್ಷಣಗಳನ್ನು ಹೊಂದಿವೆ. ಸರಕಾರದ ಎಲ್ಲಾ ಕಾರ್ಯಗಳು ಸಂಘಟಿತ ವಲಯದ ಅಡಿಯಲ್ಲಿ ಬರುತ್ತವೆ. ಖಾಸಗಿಯಾದ ವಲಯಗಳು ಸಂಘಟಿತರಾಗಿದ್ದು ಇವುಗಳು ಸರಕಾರದ ರೀತಿನೀತಿಗಳಿಗೆ ಪೂರಕವಾಗಿ ಕೆಲಸ ಮಾಡುತ್ತವೆ. ಅದರಲ್ಲಿ ಮುಖ್ಯವಾಗಿ ಲೈಸನ್ಸ್ ಹೊಂದುವುದು, ಸಂಬಳ ಕೊಡುವಂತದ್ದು, ಸುಂಕ, ಮೀಸಲಾತಿ, ತೆರಿಗೆ ವಿನಾಯಿತಿ ಮತ್ತು ರಜಾದಿನದ ಅವಕಾಶಗಳು ಹಾಗೂ ಹೊಸ ತಂತ್ರಜ್ಞಾನಗಳ ಆವಿಷ್ಕಾರ, ಆದರೆ ಅಸಂಘಟಿತ ವಲಯದಲ್ಲಿ ಇವೆಲ್ಲಾ ಕಂಡು ಬರುವುದಿಲ್ಲ ಹಾಗೂ ಯಾವುದೇ ಇಂತಹ ಪ್ರಯೋಜನಗಳು ಇರುವುದಿಲ್ಲ ಎಂದು ಲೇಖಕರು ವಿವರಿಸಿದ್ದಾರೆ.

**ವೈಟ್ ಮತ್ತು ಗುರುಡ್ಯಲ್ ಸಿಂಗ್** ಅವರ ಅಭಿಪ್ರಾಯದಂತೆ ರಾಜಸ್ಥಾನದಲ್ಲಿರುವ ಕೈಗಾರಿಕಾ ಕೇಂದ್ರವಾದ ಕೋಟಾದಲ್ಲಿ ಅಸಂಘಟಿತ ಕಾರ್ಮಿಕರ ಪರವಾಗಿ ಕಾರ್ಮಿಕರಿಂದಲೇ ಮಾಹಿತಿಯನ್ನು ಸಂಗ್ರಹಿಸಿ ನಡೆಸಿದ ಅಧ್ಯಯನದಲ್ಲಿ ಮುಖ್ಯವಾಗಿ ಕಂಡುಬಂದಿರುವ ಅಂಶಗಳಲ್ಲಿ ಅವರಿಗೆ ನೀಡುವ ವೇತನ ಮತ್ತು ಕೆಲಸದ ವಾತಾವರಣವನ್ನು ಸಂಘಟಿತ ಕಾರ್ಮಿಕರಿಗೆ ಕೊಡುವಂತೆ ಮಾಡಬೇಕೆನ್ನುವುದು ಲೇಖಕರ ಅಭಿಪ್ರಾಯವಾಗಿದೆ.

**ಜಾನ್ ವಿಟ್ರಿಕ್** ಅವರ ಅಧ್ಯಯನದಲ್ಲಿ ಫ್ರಾನ್ಸ್ ನ ಪ್ಯಾರಿಸ್ ಪಟ್ಟಣದಲ್ಲಿ ಋತುಮಾನಕ್ಕನುಗುಣವಾಗಿ ನಿರುದ್ಯೋಗದ ಸಮಸ್ಯೆಯು ಕಟ್ಟಡ ಕಾರ್ಮಿಕರಲ್ಲಿ ಕಂಡು ಬಂದಿರುತ್ತದೆ. ಇದರ ಅಧ್ಯಾಯನದಲ್ಲಿ ಮುಖ್ಯವಾಗಿ ಯಾವ ರೀತಿ ಉತ್ಪಾದನಾ ಕೆಲಸಗಳು ಸ್ಥಗಿತಗೊಳ್ಳುತ್ತವೆ ,ಉದ್ಯೋಗ ಮತ್ತು ಆದಾಯವು ಮುಖ್ಯವಾಗಿ ಋತುಮಾನಕ್ಕೆ ಅನಪಾತವಾಗಿ ಇರುವುದರಿಂದ ಅವರ ಗಳಿಕೆಯ ಆದಾಯವು ತುಂಬಾ ಕಡಿಮೆಯಿರುತ್ತದೆ. ಎಂದು ಅಧ್ಯಯನಕಾರರು ತಿಳಿಸಿರುತ್ತಾರೆ.

**ಬಿ. ಮೊನ್ನುಸಾಮಿ** ಅವರ ಅಭಿಪ್ರಾಯದಂತೆ ಅಸಂಘಟಿತ ಕಟ್ಟಡ ಕಾರ್ಮಿಕರು ಆರ್ಥಿಕವಾಗಿ ತೀರಾ ಹಿಂದುಳಿದಿದ್ದು ಕೆಲಸ ಮಾಡುವ ಬಗ್ಗೆ ಇರುವ ಸಾಮಾಜಿಕ ಅಜ್ಞಾನ, ಕಡಿಮೆ ವೇತನದ ದರ, ಅಸ್ತಿತ್ವದಲ್ಲಿರುವ ಕಳಪೆ ಕೆಲಸದ ವಾತಾವರಣ, ಉದ್ಯೋಗ ಇಲ್ಲದಿರುವಿಕೆ ಇವೆಲ್ಲಾ ಅಸಂಘಟಿತ ಕಟ್ಟಡ ಕಾರ್ಮಿಕರ ಸ್ಥಿತಿಗತಿ ಉತ್ತಮಗೊಳ್ಳದಿರಲು ಮುಖ್ಯವಾದ ಕಾರಣವಾಗಿದೆ ಎಂದು ತಿಳಿಸಿರುತ್ತಾರೆ.

**ಮನೋಹರ್ (೧೯೮೩)** ಇವರ ಅಭಿಪ್ರಾಯದಂತೆ ಪುರುಷ ಏಕಸ್ವಾಮ್ಯತೆಯ ಬದಲಾಗಿ ಮಹಿಳೆಯರನ್ನೂ ಕೂಡಾ ಅಸಂಘಟಿತ ಕಾರ್ಮಿಕರಲ್ಲಿ ಯಾವುದೇ ತಾರತಮ್ಯ ಇಲ್ಲದೆ ಕೆಲಸ ಮಾಡುವಂತಹ ವಾತಾವರಣವನ್ನು ಉಂಟು ಮಾಡಬಹುದು. ಅವರ ಪ್ರಕಾರ ಮಹಿಳೆಯರು ಅವಲಂಬಿಗಳಾಗಿದ್ದಾರೆ ಹಾಗೂ ಮತ್ತೊಬ್ಬರ ಕೈ ಕೆಳಗೆ ಕೆಲಸ ಮಾಡಲು ಇಷ್ಟಪಡುತ್ತಾರೆ, ಇದು ಅವರನ್ನು ಉತ್ತಮವಲ್ಲದ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯಲ್ಲಿ ಕೆಲಸ ಮಾಡುವಂತೆ ಮಾಡಿದೆ, ಬಡತನ ಹಾಗೂ ಹಣಕಾಸಿನ ತೊಂದರೆಗಳಿಂದ ಮುಕ್ತಿ ಹೊಂದಲು ಇಂತಹ ವಿಧ್ಯಾಭ್ಯಾಸಗಳಿಲ್ಲದ ಕೆಲಸದಲ್ಲೂ ಭಾಗವಹಿಸಬಹುದು ಎಂದು ತಿಳಿಸಿರುತ್ತಾರೆ.

**ಅಹುಲುವಾಲಿಯಾ (೧೯೮೫-೧೯೯೧)** ಇವರು ತಮ್ಮ ಅಧ್ಯಯನದಲ್ಲಿ ೧೯೫೯ ರಿಂದ ೧೯೮೫ರ ವರೆಗಿನ ಪರಿಸ್ಥಿತಿಯನ್ನು ಅವಲೋಕಿಸಿದಾಗ ಇವರು ಮುಖ್ಯವಾಗಿ ಉತ್ಪಾದನಾಂಗಗಳ ಲಭ್ಯತೆಯ ಆಧಾರದ ಮೇಲೆ ಅಧ್ಯಯನವನ್ನು ಕೈಗೊಂಡು. ೧೯೫೯-೧೯೮೫ ರ ಅವಧಿಯಲ್ಲಿನ ಒಟ್ಟು ಉತ್ಪಾದನಾಂಗಗಳ ಲಭ್ಯತೆಯು ಕ್ಷೀಣಿಸುತ್ತಾ ಬಂದಿದೆ, ಆದರೂ ಮೊದಲಾರ್ಧದಲ್ಲಿ ಉತ್ಪಾದಕತೆಗಳ ದರವು ಉತ್ತಮವಾಗಿದೆ.ಆದರೆ ಹೇರಳವಾಗಿ ಸಿಗುವಂತಹ ಉತ್ಪಾದನಾಂಗಗಳಿಂದ ಉತ್ಪಾದಕತೆಗಳ ಮೌಲ್ಯ ಹೆಚ್ಚಿದೆ ಎಂದು ಲೇಖಕರು ವಿವರಿಸಿದ್ದಾರೆ.

**ಬ್ಯಾನರ್ಜಿ (೧೯೮೩)** ಅವರು ನಡೆಸಿದ ಅಧ್ಯಾಯದಲ್ಲಿ ೧೯೭೫-೧೯೭೬ರ ಕಾಲಘಟ್ಟದಲ್ಲಿ ಅಸಂಘಟಿತ ವಲಯದ ಉದ್ಯೋಗವು ತಾತ್ಕಾಲಿಕವಾಗಿತ್ತು ಹಾಗೂ ಅಲ್ಲಿ ಬಂದ ವಲಸೆ ಕಾರ್ಮಿಕರಲ್ಲಿ ೫೦ ಶೇಕಡಾದಷ್ಟು

ಕೆಲಸಗಾರರು ಈ ಅಸಂಘಟಿತ ವಲಯವನ್ನು ಆರಿಸಿಕೊಂಡಿದ್ದಾರೆ. ಯಾಕೆಂದರೆ ಈ ವಲಯದಲ್ಲಿ ಸಿಗುವ ಅವಕಾಶಗಳಿಗಾಗಿ ಇಂತಹ ಕೆಲಸಗಳಿಗೆ ಯಾವುದೇ ವಿಧ್ಯಾಭ್ಯಾಸದ ಪ್ರಮಾಣಪತ್ರ ಬೇಕಾಗಿಲ್ಲ, ಕೆಲಸ ಮಾಡುವ ಕೌಶಲ್ಯವು ಮುಖ್ಯವಾಗಿರುತ್ತದೆ. ಆದರೆ ಈ ವಲಯದಲ್ಲಿ ಅವರ ಆದಾಯದ ಗಳಿಕೆಯು ಕಡಿಮೆಯಿರುತ್ತದೆ ಆದರೆ ಪ್ರತಿಫಲವಾಗಿ ವಿಧ್ಯಾಭ್ಯಾಸ ಮತ್ತು ಅನುಭವಗಳು ಎರಡು ವಲಯಗಳಲ್ಲಿಯೂ ಒಂದೇ ಇರುತ್ತದೆ ಎಂದು ವಿವರಣಾತ್ಮಕವಾಗಿ ವಿವರಿಸಿದ್ದಾರೆ.

**ಮಿತ್ರ (೧೯೯೪)** ಅವರು ವಿವರಣಾತ್ಮಕವಾಗಿ ಸಂಘಟಿತ ಮತ್ತು ಅಸಂಘಟಿತ ವಲಯಗಳ ಸಂಬಂಧವು ಭಾರತದ ಪಟ್ಟಣ ಪ್ರದೇಶದಲ್ಲಿರುವ ಉದ್ಯೋಗದಾತರ ಮಾಹಿತಿಯ ಮೇರೆಗೆ ಸಂಶೋಧನೆಯನ್ನು ನಡೆಸಿ ಅದರಿಂದ ದೊರೆತ ಮಾಹಿತಿಯ ಪ್ರಕಾರ ವರ್ಷ ೧೯೭೧ ರಲ್ಲಿ ೨೧.೩ ಶೇಕಡಾ ದಷ್ಟು ಅಸಂಘಟಿತ ವಲಯದ ಉದ್ಯೋಗವು ಚಂದೀಘರ್ ನಲ್ಲಿ ಮತ್ತು ೩೯.೪ ಶೇಕಡಾ ಔರಾದಲ್ಲಿ ಹಾಗೂ ೯೬.೮೫ ಶೇಕಡಾ ದಷ್ಟು ಉತ್ತಮ ಅಂಕಿ ಅಂಶವು ಶಹಜಹಾನ್ ಪುರದಲ್ಲಿ ಹಾಗೂ ೯೨ ಶೇಕಡಾ ಉದ್ಯೋಗವು ಥಂ ಥಂ ನಲ್ಲಿ ಕಂಡುಬಂತು. ಆದರೆ ಈ ಅನುಪಾತವು ಮುಖ್ಯವಾಗಿ ಆ ಪಟ್ಟಣದ ಜನಸಂಖ್ಯೆಗೆ ಹೋಲಿಸಿದಾಗ ಅಸಂಘಟಿತ ವಲಯದ ಉದ್ಯೋಗದ ಪ್ರಮಾಣವು ಸಂಘಟಿತ ವಲಯದಿಂದ ಅಧಿಕವಾಗಿದೆ. ಎಂದು ತಿಳಿಸಿರುತ್ತಾರೆ.

**ಸಿಂಗ್ ಮತ್ತು ಜೈನ್** ತಮ್ಮ ಅಧ್ಯಯನದಲ್ಲಿ ಅಸಂಘಟಿತ ವಲಯದ ಕಾರ್ಮಿಕರ ಜೀವನದ ಮಟ್ಟದಲ್ಲಿ ಯಾವ ರೀತಿ ಕ್ರಾಂತಿಯನ್ನು ಉಂಟುಮಾಡಿದೆ ಎಂದು ಅಧ್ಯಯನ ದಲ್ಲಿ ವಿವರಿಸಿದ್ದಾರೆ. ಕಾರ್ಮಿಕರ ತಲಾ ಆದಾಯದ ವಿಷಯಕ್ಕೆ ಸಂಬಂಧಿಸಿದಂತೆ ಒಟ್ಟು ಆದಾಯದಲ್ಲಿ ತುಲನೆ ಮಾಡುವುದು ಮತ್ತು ವ್ಯತ್ಯಾಸವನ್ನು ಪರಿಗಣಿಸಿ ಆದಾಯವನ್ನು ಹಂಚಿಕೆ ಮಾಡಲಾಗುವುದು, ಅನುಭೋಗದ ವೆಚ್ಚವನ್ನು ವಿಶ್ಲೇಷಣೆ ಮಾಡಿ, ಬಡತನದ ವಿಶಾಲತೆಗೆ ಬೆಲೆ ಕಟ್ಟುವುದು ಅಥವಾ ಅಳತೆ ಮಾಡುವುದು ಎಂಬಿತ್ಯಾದಿ ಅಂಶಗಳನ್ನು ವಿವರವಾಗಿ ತಿಳಿಸಿದ್ದಾರೆ.

**ರಾಮೇಗೌಡರು** ಬರೆದ ಜಂಡರ್ ಇನ್ ಇಕ್ವಾಲಿಟಿ ಪವರ್ ಪ್ರಿವಿಲೇಜ್ ಆಂಡ್ ಲಿಬರ್ಟಿ ಇನ್ಪ್ಲಂಟೇಶನ್ ಇದರ ಹೇಳಿಕೆಯಲ್ಲಿ ಕಾಫಿ ತೋಟದಲ್ಲಿ ದುಡಿಯುವ ಕಾರ್ಮಿಕರ ಸಾಮಾಜಿಕ –ಆರ್ಥಿಕ ಸ್ಥಿತಿಗತಿಗಳನ್ನು ಕುರಿತ ಮಾಹಿತಿಯನ್ನು ಚರ್ಚಿಸಲಾಗಿದೆ.ಭಾರತದ ಆರ್ಥಿಕ ವಲಯದಲ್ಲಿ ಸಂಘಟಿತ ವಲಯ ಬಹಳ ಮುಖ್ಯ. ಆದರೆ ಸಂಗಟಿತ ವಲಯದ ಚಟುವಟಿಕೆಗಳನ್ನು ಗಾಳಿಗೆ ತೂರಿ ಅಸಂಘಟಿತ ವಲಯದ ಚಟುವಟಿಕೆಗಳನ್ನು ಕಾಫಿ ತೋಟದಲ್ಲಿ ದುಡಿಯುವ ಕಾರ್ಮಿಕರ ಮೇಲೆ ವಿಧಿಸಲಾಯಿತು . ದುಡಿಮೆಯ ಸ್ಥಳದಲ್ಲಿ ಕಾರ್ಮಿಕ ಶಕ್ತಿಯ ಬಳಕೆ, ಅವರ ದೈಹಿಕ, ಮಾನಸಿಕ ಶಕ್ತಿಯ ಹಿನ್ನೆಲೆ ಅವರ ಕೂಲಿ ಸೌಲಭ್ಯಗಳ ಸ್ವರೂಪ .ಅವರ ಕ್ಷೇಮಾಭಿವೃದ್ದಿ ಕಾರ್ಯಕ್ರಮಗಳ ಬಗ್ಗೆ ಚರ್ಚಿಸಲಾಗಿದೆ.

**ಸಾವಿತ್ರಿ ಅರ್ಪಟಮುರ್ತಿಯವರ** ಹೇಳಿಕೆಯಂತೆ ಕೃಷಿ ವಲಯದ ಮಾರುಕಟ್ಟೆಯಲ್ಲಿ ಲಿಂಗಾಧಾರಿತ ತಾರತಮ್ಯವನ್ನು ಕಾಣಬಹುದು.ಈ ಆಧಾರದಲ್ಲಿ ಲಿಂಗಾಧಾರಿತ ವೇತನ /ಕೂಲಿಯು ಪೂರ್ವಗ್ರಹ ಪೀಡಿತ ಕಲ್ಪನೆಗೆ ಒಳಗಾಗಿದೆ ಎಂಬ ಅಂಶವನ್ನು ವಿವರಿಸಲಾಗಿದೆ.

**ಸಮಸ್ಯೀಕರಣ :**

ಭಾರತದಲ್ಲಿ ಪುರುಷ ಕಾರ್ಮಿಕರ ಸ್ಥಿತಿಗತಿಗಳನ್ನು ,ಚಳುವಳಿಗಳನ್ನು ಹಾಗೂ ಉದ್ಯಮಶೀಲತೆ ಇತ್ಯಾದಿ ವಿಷಯಗಳ ಬಗ್ಗೆ ಸಾಕಷ್ಟು ಅಧ್ಯಯನಗಳು ನಡೆದಿರುತ್ತದೆ. ಆದರೆ ಅಸಂಘಟಿತ ಕ್ಷೇತ್ರದ ಕಟ್ಟಡ ಕಾರ್ಮಿಕರ ಅಧ್ಯಯನ ನಡೆದಿಲ್ಲವಾದುದರಿಂದ ಅವುಗಳ ಬಗ್ಗೆ ಅನೇಕ ಕುತೂಹಲಕಾರಿ ಪ್ರಶ್ನೆಗಳು ಮೂಡುತ್ತವೆ . ಆದುದರಿಂದ ಇದರ ಬಗ್ಗೆ ಒಂದು ವಾಸ್ತವ ಚಿತ್ರಣದ ಅರಿವನ್ನು ಪಡೆಯಲು ಈ ಸಂಶೋಧನಾ ಪ್ರಬಂಧವು ಅಗತ್ಯವೆನಿಸುತ್ತದೆ.

ಮೇಲಿನ ಅಧ್ಯಯನವನ್ನು ಗಮನಿಸಿದಾಗ ಕಟ್ಟಡ ಕಾರ್ಮಿಕರ ಶಿಕ್ಷಣ, ಸಂಭಾವಣೆ ಆರೋಗ್ಯ ಸ್ಥಿತಿಗತಿಗಳು ಮತ್ತು ವಿಶ್ಲೇಷಣೆಯನ್ನು ಗಮನಿಸಿದಾಗ ಕೆಲವೊಂದು ಪ್ರಶ್ನೆಗಳನ್ನು ಗಮನಿಸಬಹುದು.

೧. ಅಸಂಘಟಿತ ಕಟ್ಟಡ ಕಾರ್ಮಿಕರು ಯಾಕೆ ಈ ವಲಯವನ್ನು ಸೇರಿಕೊಂಡರು?

೨. ಸರಕಾರದಿಂದ ಯಾವೆಲ್ಲಾ ಸವಲಭ್ಯಗಳು ಸಿಗುತ್ತವೆ ಹಾಗೂ ಆ ಸೌಲಭ್ಯಗಳ ಉಪಯೋಗವನ್ನು ಕಾರ್ಮಿಕರು ಪಡೆಯುತ್ತಿದ್ದಾರೆಯೇ?

೩. ಯಾವ ರೀತಿ ಅವರ ಸೇವೆಯನ್ನು ಪರಿಗಣಿಸಬಹುದು?

೪. ಜಾತೀವಾದ ಅಸಂಘಟಿತ ವಲಯಕ್ಕೆ ಮಾರಕವಾಗಿದೆಯೇ?

೫. ಯಾವ ರೀತಿ ಅವರ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನ ಸುಧಾರಣೆಯಾಗಿದೆ?

೬. ಕಟ್ಟದ ಕಾರ್ಮಿಕರು ಈ ವಲಯವನ್ನು ಆಯ್ಕೆ ಮಾಡಿಕೊಂಡಿರುವುದಕ್ಕೆ ಕಾರಣಗಳು?

೭. ಗ್ರಾಮೀಣ ಪ್ರದೇಶದಲ್ಲಿರುವ ಅಸಂಘಟಿತ ಕಾರ್ಮಿಕರನನ್ನು ಯಾಕೆ ಗಣನೆಗೆ ತೆಗೆದುಕೊಂಡಿಲ್ಲ?

೮. ಕಟ್ಟಡ ಕಾರ್ಮಿಕರು ಕೃಷಿ ಕಾರ್ಮಿಕರಿಂದ ಹೇಗೆ ಭಿನ್ನತೆಯನ್ನು ಹೊಂದಿದ್ದಾರೆ?

ಈ ಮೇಲಿನ ಎಲ್ಲಾ ಪ್ರಶ್ನೆಗಳನ್ನು ಗಮನದಲ್ಲಿಟ್ಟುಕೊಂಡು ಪೆರ್ನೆ ಗ್ರಾಮದಲ್ಲಿ ದುಡಿಯುವ ಅಸಂಘಟಿತ ಪುರುಷ ಕಟ್ಟಡ ಕಾರ್ಮಿಕರ ಅಧ್ಯಯನವನ್ನು ಮಾಡಲಾಗಿದೆ.

## ಅಧ್ಯಯನದ ಉದ್ದೇಶಗಳು :

ಈ ಅಧ್ಯಯನದ ಮುಖ್ಯ ಉದ್ದೇಶವೇನಂದರೆ ಅಸಂಘಟಿತ ಕಟ್ಟಡ ಕಾರ್ಮಿಕರ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಯನ್ನು ತಿಳಿದುಕೊಂಡು ಪೆರ್ನೆ ಗ್ರಾಮದ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಈ ಕೆಳಕಂಡಂತಹ ಉದ್ದೇಶಗಳನ್ನು ಈ ಸಂಶೋಧನೆಯಲ್ಲಿ ಚರ್ಚಿಸಲಾಗಿದೆ.

೧. ಕಟ್ಟಡ ಕಾರ್ಮಿಕರು ಅಸಂಘಟಿತ ವಲಯಕ್ಕೆ ಪ್ರವೇಶಗೊಳ್ಳಲು ಕಾರಣಗಳನ್ನು ತಿಳಿಯುವುದು.

೨. ಅಸಂಘಟಿತ ಕಟ್ಟಡ ಕಾರ್ಮಿಕರಿಗೆ ಇರುವ ಸೌಲಭ್ಯ,ಸಂಘಟಿತ ವಲಯದಿಂದ ಸಿಗುವ ಅಥವಾ ಸರಕಾರ ನೀಡುವ ಸೌಲಭ್ಯ ಮತ್ತು ಸವಲತ್ತುಗಳನ್ನು ಅಧ್ಯಯನ ಮಾಡುವುದು.

೩. ಅಸಂಘಟಿತ ಕಟ್ಟಡ ಕಾರ್ಮಿಕರ ಸೇವೆಯನ್ನು ಪರಿಗಣಿಸುವ ವಿಧಾನಗಳನ್ನು ತಿಳಿಯುವುದು.

೪. ಕಟ್ಟಡ ಕಾರ್ಮಿಕರಲ್ಲಿ ಯಾವ ವರ್ಗದವರು ಅಧಿಕ ಪ್ರಮಾಣದಲ್ಲಿ ಇರುತ್ತಾರೆ ಎಂದು ಅಧ್ಯಯನ ಮಾಡುವುದು.

೫. ಅಸಂಘಟಿತ ಕಟ್ಟಡ ಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯನ್ನು ತಿಳಿಯುವುದು,ಹಾಗು ಅವರ ಸಾಮಾಜಿಕ ಜೀವನದ ಪರಿಚಯವನ್ನು ಚರ್ಚಿಸುವುದು.

೬. ಕಟ್ಟಡ ಕಾರ್ಮಿಕರಲ್ಲಿ ಕೌಶಲ್ಯಭರಿತ ಮತ್ತು ಕೌಶಲರಹಿತ ಎಂದು ಗುರುತಿಸುವ ವಿಧಾನಗಳನ್ನು ಅಧ್ಯಯನ ಮಾಡುವುದು.

೭. ಕಟ್ಟಡ ಕಾರ್ಮಿಕರ ಸ್ಥಿತಿಗತಿಗಳನ್ನು ಚರ್ಚಿಸಿ ಸೂಕ್ತವಾದ ಪರಿಹಾರವನ್ನು ಸೂಚಿಸುವುದು.

## ಅಧ್ಯಯನದ ವಿಧಾನಗಳು :

ಪೆರ್ನೆ ಗ್ರಾಮದ ಅಸಂಘಟಿತ ಕಟ್ಟಡ ಕಾರ್ಮಿಕ ಉದ್ಯೊಗಿಗಳಿಂದ ಮಾಹಿತಿಯನ್ನು ಸಂಗ್ರಹಿಸಲು ಕೆಲವು ವಿಧಾನಗಳನ್ನು ಪರಿಶೀಲಿಸಲಾಗಿದೆ. ಮಾಹಿತಿ ಸಂಗ್ರಹಣೆಯನ್ನು ಎರಡು ವಿಧಗಳಲ್ಲಿ ಮಾಡಲಾಗಿದೆ. ಅನುಷಂಗಿತ ಮತ್ತು ಪ್ರಾಥಮಿಕ ವಿಧಾನ. ಪ್ರಾಥಮಿಕ ವಿಧಾನದಲ್ಲಿ ಪೆರ್ನೆ ಗ್ರಾಮದ ಕಟ್ಟಡ ಕಾರ್ಮಿಕರಿಂದ ಪ್ರಶ್ನಾವಳಿಯ ಮೂಲಕ ಮಾಹಿತಿ ಸಂಗ್ರಹಣೆಯನ್ನು ಮಾಡಲಾಗಿದ್ದು. ಎರಡನೆಯದು ಅನುಷಂಗೀಕ ವಿಧಾನ. ಇಲ್ಲಿ ಅಧ್ಯಯನದ ಸೈಧ್ಧಾಂತಿಕ ನೆಲೆಯನ್ನು ಒದಗಿಸಲು ವಿವಿಧ ಗ್ರಂಥಗಳು ಮತ್ತು ಸಂಶೋಧನ ಲೇಖನಗಳ ಮೂಲಕ ಪರಾಮರ್ಶೆ ಮಾಡಲಾಗುವುದು. ಹಾಗೂ ಇತ್ತೀಚೆಗಿನ ಕಟ್ಟಡ ಕಾರ್ಮಿಕರ ಬಗ್ಗೆ ಪರಿಶೀಲಿಸಲು ದಿನಪತ್ರಿಕೆಗಳು ಮತ್ತು ಅಂತರ್ ಜಾಲಗಳಿಂದ ಮಾಹಿತಿಗಳನ್ನು ಸಂಗ್ರಹಿಸಲಾಗುವುದು ಹಾಗೂ ಜನಗಣತಿ ವರದಿ,ಮಾನವ ಅಭಿವೃದ್ಧಿ ಸೂಚ್ಯಂಕ ಹಾಗೂ ದಕ್ಷಿಣ ಕನ್ನಡ ಗೆಜೆಟ್ ಇಯರ್, ಲೇಖನಗಳು ಹಾಗೂ ಪ್ರಕಟಿತ ಮತ್ತು ಅಪ್ರಕಟಿತ ಮಹಾಪ್ರಬಂಧಗಳ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗುವುದು.

ಹೀಗೆ ಎರಡು ವಿಧಾನಗಳಿಂದ ಸಂಗ್ರಹಿಸಿದ ಮಾಹಿತಿಗಳನ್ನು ಸೂಕ್ತ ಕೋಷ್ಟಕಗಳನ್ನಾಗಿ ವಿಂಗಡಿಸಿ ಸರಳ ಅಂಕಿ ಅಂಶಗಳ ತಂತ್ರಗಳಾದ ಅನುಪಾತ ಪ್ರಮಾಣ ಮತ್ತು ಶೇಕಡಾಮಾರು ಪ್ರಮಾಣಗಳ ಮೂಲಕ ವಿಶ್ಲೇಷಣೆ ಮಾಡಲಾಗುವುದು. ಅಧ್ಯಯನದ ಸೈಧ್ಧಾಂತಿಕ ನೆಲೆಯನ್ನು ಒದಗಿಸಲು ವಿವಿಧ ಗ್ರಂಥಗಳು ಮತ್ತು ಸಂಶೋಧನಾ ಲೇಖನಗಳ ಮೂಲಕ ಪರಾಮರ್ಷೆ ಮಾಡಲಾಗುವುದು. ಹೀಗೆ ಸಂಗ್ರಹಿಸಿದ ಮಾಹಿತಿಯನ್ನು ಸೂಕ್ತ ಕೋಷ್ಟಕಗಳನ್ನಾಗಿ ವಿಂಗಡಿಸಿ ಸರಳ ಅಂಕಿ ಅಂಶಗಳ ತಂತ್ರಗಳಾದ ಅನುಪಾತ ಪ್ರಮಾಣ ಮತ್ತು ಶೇಕಡಾವಾರು ಪ್ರಮಾಣಗಳ ಮೂಲಕ ವಿಶ್ಲೇಷಿಸಿ ಅರ್ಥೈಸಲಾಗುವುದು.

**ಅಧ್ಯಯನದ ವ್ಯಾಪ್ತಿ:**

ಅಧ್ಯಯನದ ಸಮಸ್ಯೆಗಳ ವಿಶ್ಲೇಷಣೆಗೆ ಕರ್ನಾಟಕ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆಯನ್ನು ತೆಗೆದುಕೊಳ್ಳಲಾಗುದು. ಜಿಲ್ಲೆಯಲ್ಲಿರುವ ಬಂಟ್ವಾಳ ತಾಲೂಕಿನ ಪೆರ್ನೆ ಗ್ರಾಮದ ಅಸಂಘಟಿತ ಕಟ್ಟಡ ಕಾರ್ಮಿಕರಲ್ಲಿ ಪುರುಷರನ್ನು ಮಾತ್ರ ಪರಿಗಣಿಸಲಾಗಿದೆ.ವಲಸೆ ಕಾರ್ಮಿಕರನ್ನು ಹಾಗು ಮಹಿಳಾ ಕಾರ್ಮಿಕರನ್ನು ಗಣನೆಗೆ ತೆಗೆದುಕೊಂಡಿರುವುದಿಲ್ಲ.

**ಅಧ್ಯಯನದ ಇತಿಮಿತಿಗಳು :**

ಅಸಂಘಟಿತ ಕಟ್ಟಡ ಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು ಈ ಅಧ್ಯಯನದ ವ್ಯಾಪ್ತಿಯನ್ನು ಪೆರ್ನೆ ಗ್ರಾಮದ ವ್ಯಾಪ್ತಿಗೆ ಸೀಮಿತಗೊಳಿಸಲಾಗಿದೆ.

1. ಈ ಅಧ್ಯಯನದಲ್ಲಿ ಪರ್ನೆ ಗ್ರಾಮದ ಅಸಂಘಟಿತ ಕಟ್ಟಡ ಕಾರ್ಮಿಕ ಉದ್ಯೋಗಿಗಳನ್ನು ಮಾತ್ರ ಪರಿಗಣಿಸಲಾಗಿದೆ.
2. ಈ ಅಧ್ಯಯನದಲ್ಲಿ ಸಮಯದ ಅಭಾವ ಅಂದರೆ ಸಮಯದ ಮಿತಿಯನ್ನು ನಿರ್ಧರಿಸಲಾಗಿದೆ
3. ಈ ಅಧ್ಯಯನದಲ್ಲಿ ಪುರುಷ ಕಟ್ಟಡ ಕಾರ್ಮಿಕರನ್ನು ಮಾತ್ರ ಪರಿಗಣನೆಗೆ ತೆಗೆದುಕೊಳ್ಳಲಾಗಿದೆ.
4. ಈ ಅಧ್ಯಯನದಲ್ಲಿ ವಲಸೆ ಕಟ್ಟಡ ಕಾರ್ಮಿಕರನ್ನು ಗಣನೆಗೆ ತೆಗೆದುಕೊಂಡಿರುವುದಿಲ್ಲ.

**ಅಧ್ಯಯಗಳು :**

ಈ ಸಂಶೋಧನಾ ಅಧ್ಯಯನವನ್ನು ಆರು ಮುಖ್ಯ ಅಧ್ಯಯನಗಳಾಗಿ ವಿಂಗಡಿಸಲಾಗಿದೆ

ಮೊದಲನೆಯ ಅಧ್ಯಯದಲ್ಲಿ ಪೀಠಿಕೆ, ಉದ್ದೇಶಗಳು, ಅಧ್ಯಾಯದ ವಿಧಾನಗಳು, ಸಮಸ್ಯೆಗಳ ಬಗ್ಗೆ ವಿವರಣೆ ನೀಡಲಾಗುವುದು.

ಎರಡನೇ ಅಧ್ಯಾಯದಲ್ಲಿ ಪೆರ್ನೆ ಗ್ರಾಮದ ಕ್ಷೇತ್ರ ಪರಿಚಯವನ್ನು ಮಾಡಲಾಗುವುದು.

ಮೂರನೇ ಅಧ್ಯಾಯದಲ್ಲಿ ಅಸಂಘಟಿತ ಕಾರ್ಮಿಕರಿಗೆ ಸರಕಾರದಿಂದ ಸಿಗುವಂತಹ ಸೌಲಭ್ಯಗಳ ಬಗ್ಗೆ ವಿಶ್ಲೇಷಣೆ ಮಾಡಲಾಗುವುದು.

ನಾಲ್ಕನೇ ಅಧ್ಯಾಯದಲ್ಲಿ ಅಸಂಘಟಿತ ಕಾರ್ಮಿಕರ ಆರ್ಥಿಕ ಮತ್ತು ಸಾಮಾಜಿಕ ಜೀವನದ ವಿಷ್ಲೇಷಣೆ ಮಾಡಲಾಗುವುದು. ಐದನೇ ಅಧ್ಯಾಯದಲ್ಲಿ ಕಟ್ಟಡ ಕಾರ್ಮಿಕರು ಅನಂಘಟಿತ ವಲಯದಲ್ಲಿ ಉಳಿಯಲಿರುವ ಅಂಶಗಳನ್ನು ವಿವರಿಸಲಾಗುವುದು.

ಆರನೆಯ ಅಧ್ಯಾಯದಲ್ಲಿ ಸಲಹೆ ಮತ್ತು ಸೂಚನೆಗಳ ಪರಿಹಾರವನ್ನು ಕೊಡಲಾಗುವುದು.

ಹಿಂದಿನ ಅಧ್ಯಾಯದಲ್ಲಿ ಪೀಠಿಕೆ,ಉದ್ದೇಶಗಳು ಅಧ್ಯಯನದ ವಿಧಾನಗಳು ,ಸಮಸ್ಯೆಗಳ ವಿಶ್ಲೇಷಣೆಯನ್ನು ಮಾಡಿದ್ದೇವೆ.  ಈ ಅಧ್ಯಾಯದಲ್ಲಿ ಪೆರ್ನೆ ಗ್ರಾಮದ ಭೌಗೋಳಿಕ ಹಿನ್ನೆಲೆ,ಆರ್ಥಿಕ ಹಿನ್ನೆಲೆ,ಸಾಮಾಜಿಕ ಹಿನ್ನೆಲೆಯನ್ನು ಚರ್ಚಿಸಲಾಗಿದೆ.

ಗ್ರಾಮ ಎಂಬುದು ಅಭಿವೃದ್ಧಿ ಹೊಂದುತ್ತಿರುವ ಪ್ರದೇಶವಾಗಿದೆ ಅಥವಾ ನಗರದಿಂದ ದೂರದಲ್ಲಿರುವ ಪ್ರದೇಶವನ್ನು ಗ್ರಾಮ ಎನ್ನಬಹುದು.ಗ್ರಾಮದಲ್ಲಿ ಯಾವುದೇ ಸೌಕರ್ಯಗಳು ಸಿಗುವುದಿಲ್ಲ. ಗ್ರಾಮಗಳಲ್ಲಿ ಪ್ರಕೃತಿ ದತ್ತವಾದ ಪರ್ವತಗಳಿವೆ, ಹಚ್ಚಹಸುರಿನ ಮರಗಿಡಗಳಿವೆ ಹಾಗೂ ಸರೋವರಗಳಿವೆ, ಗದ್ದೆಗಳಿವೆ ಇತ್ಯಾದಿ. ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಿನ ಜನರು ರೈತರಾಗಿದ್ದಾರೆ, ಅವರು ಬೇಕಾದ ವಸ್ತುಗಳನ್ನು ತಾವೇ ಬೆಳೆಯುತ್ತಾರೆ, ಅದೂ ಅಲ್ಲದೆ ಅವರು ಪ್ರಾಣಿಗಳನ್ನೂ ಸಾಕುತ್ತಾರೆ, ದನ, ಆಡು, ಕುರಿ ಇತ್ಯಾದಿ. ಅದರ ಉದ್ದೇಶ ಮಾಂಸಕ್ಕಾಗಿ ಹಾಗೂ ರಸಗೊಬ್ಬರಗಳಿಗಾಗಿ, ಕೆಲವು ಜನರು ಸಣ್ಣ ಸಣ್ಣ ವ್ಯಾಪಾರ ಮಾಡುತ್ತಾರೆ. ಗ್ರಾಮ ಎಂಬುದು ಅತೀ ಸೂಕ್ಷ್ಮ ಪ್ರದೇಶವಾಗಿದೆ ಅಲ್ಲಿನ ಜನರ ಜೀವನಚಕ್ರವು ನಗರ ಪ್ರದೇಶದ ಜನರ ಜೀವನಚಕ್ರಕ್ಕಿಂತ ವಿಭಿನ್ನವಾಗಿದೆ, ಅವರು ತಮಗೆ ಬೇಕಾದ ಆಹಾರ ಪದಾರ್ಥಗಳನ್ನು ತಾವೇ ಉತ್ಪಾದಿಸುತ್ತಾರೆ.

ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲೂಕಿನಲ್ಲಿರುವ ಒಂದು ಗ್ರಾಮವೇ ಪೆರ್ನೆ. ಈ ಗ್ರಾಮವು ಮೈಸೂರು ವಿಭಾಗಕ್ಕೆ ಸೇರಿದ್ದು , ಜಿಲ್ಲಾ ಕಾರ್ಯಾಲಯವಾದ ಮಂಗಳೂರಿನಿಂದ ೪೪ ಕಿ.ಮೀ ಪೂರ್ವದಲ್ಲಿದೆ. ಬಂಟ್ವಾಳ ತಾಲೂಕಿನಿಂದ ೧೮ ಕಿ.ಮೀ ದೂರದಲ್ಲಿದೆ. ಕರ್ನಾಟಕ ರಾಜ್ಯದ ರಾಜಧಾನಿಯಾದ ಬೆಂಗಳೂರಿನಿಂದ ೩೦೫ ಕಿ.ಮೀ ಗಳಷ್ಟು ದೂರದಲ್ಲಿದೆ. ಪೆರ್ನೆ ಗ್ರಾಮವು ಅನೇಕ ಗ್ರಾಮಗಳಿಂದ ಸುತ್ತುವರಿದಿದೆ. ಹತ್ತಿರದಲ್ಲಿರುವ ಗ್ರಾಮಗಳು ಕೆದಿಲ ೩ ಕಿ.ಮೀ ಅಂತರ ಬನ್ನೂರು ಗ್ರಾಮೀಣ (ಪುತ್ತೂರು) ೪ ಕಿ.ಮೀ ಅಂತರ, ಕೋಡಿಂಬಾಡಿ ೪ ಕಿ.ಮೀ ಅಂತರ, ಕಡೇಶಿವಾಲಯ ೪ ಕಿ.ಮೀ ಅಂತರ, ಪಡ್ನೂರು ಗ್ರಾಮೀಣ ೪ ಕಿ.ಮೀ ದೂರದಲ್ಲಿದೆ. ಪೆರ್ನೆ ಗ್ರಾಮವು ಬಂಟ್ವಾಳ ತಾಲೂಕನ್ನು ಸುತ್ತುವರಿದಿದೆ. ಪಶ್ಚಿಮಕ್ಕೆ ಬಂಟ್ವಾಳ ತಾಲೂಕು, ಉತ್ತರಕ್ಕೆ ಬೆಳ್ತಂಗಡಿ ತಾಲೂಕು, ದಕ್ಷಿಣಕ್ಕೆ ಮಂಜೇಶ್ವರ ತಾಲೂಕು, ಪೂರ್ವಕ್ಕೆ ಸುಳ್ಯ ತಾಲೂಕು. ಪುತ್ತೂರು, ಮಂಗಳೂರು, ಮೂಡಬಿದ್ರೆ, ಕಾಸರಗೋಡು ಇವು ಪೆರ್ನೆ ಗ್ರಾಮದ ಹತ್ತಿರದ ಪಟ್ಟಣಗಳಾಗಿವೆ.

ಪೆರ್ನೆ ಗ್ರಾಮವು ದಕ್ಷಿಣ ಕನ್ನಡ ಮತ್ತು ಕಾಸರಗೋಡು ಜಿಲ್ಲೆಯ ಗಡಿಭಾಗದಲ್ಲಿದೆ, ಗ್ರಾಮದಲ್ಲಿ ಒಟ್ಟು ೪೩೬ ಕುಟುಂಬಗಳು ವಾಸಿಸುತ್ತದೆ. ಗ್ರಾಮದ ಜನಸಂಖ್ಯೆಯು ೨೨೨೫ ಅದರಲ್ಲಿ ೧೧೯೩ ಪುರುಷರು ಮತ್ತು ೧೧೩೨ ಮಹಿಳೆಯರಿದ್ದಾರೆ. ೨೦೧೧ ರ ಜನಗಣತಿಯ ಪ್ರಕಾರ,  ಗ್ರಾಮದಲ್ಲಿ ಮಕ್ಕಳು ೦–೬ ವರ್ಷದ ಒಳಗಿನವರು ಒಟ್ಟಾಗಿ ೨೩೮, ಇದು ಒಟ್ಟು ಜನಸಂಖ್ಯೆಯ ೧೦.೭೦ ಶೇಕಡಾ.  ಗ್ರಾಮದ ಲಿಂಗ ಅನುಪಾತ ೧೦೩೬ ಇದು ಕರ್ನಾಟಕ ರಾಜ್ಯದಲ್ಲೇ ಅಧಿಕವಾಗಿದೆ. ಕರ್ನಾಟಕ ರಾಜ್ಯದ ಸರಾಸರಿ ಲಿಂಗಾಣುಪಾತ ೯೭೩ ಆಗಿದೆ. ಶಿಶು ಲಿಂಗಾಣುಪಾತ ಪ್ರಮಾಣವು ೨೦೧೧ ರ ಜನಗಣತಿಯ ಪ್ರಕಾರ ೯೬೭ ಆಗಿದೆ ಇದು ಕರ್ನಾಟಕ ರಾಜ್ಯದ

ಸರಾಸರಿ ಅನುಪಾತದಿಂದ ಹೆಚ್ಚು ಇದೆ (೯೪೮). ಗ್ರಾಮವು ಅಧಿಕ ಶಿಕ್ಷಣದ ದರವನ್ನು ಹೊಂದಿದೆ, ೨೦೧೧ ರ ಜನಗಣತಿಯ ಪ್ರಕಾರ, ಕರ್ನಾಟಕದ ಶಿಕ್ಷಣದ ದರಕ್ಕಿಂತ ಅಧಿಕವಾಗಿದೆ. ಪೆರ್ನೆ ಗ್ರಾಮದ ಶಿಕ್ಷಿತರು ೮೩.೪೯ ಶೇಕಡಾ ಕರ್ನಾಟಕದ ದರಕ್ಕೆ ಹೋಲಿಕೆ ಮಾಡಿದಾಗ ೭೫.೩೬ ಶೇಕಡಾ. ಪುರುಷ ಶಿಕ್ಷಿತರ ಪ್ರಮಾಣವು ೮೮.೬೮ಶೇಕಡಾದಷ್ಟು ಇದೆ, ಆದರೆ ಮಹಿಳಾ ಶಿಕ್ಷಿತರ ಪ್ರಮಾಣವು ೭೮.೫೨ ಶೇಕಡಾ ಆಗಿರುತ್ತದೆ. ಪಂಚಾಯತ್‌ರಾಜ್ ಕಾಯಿದೆಯ ಪ್ರಕಾರ ಪೆರ್ನೆ ಗ್ರಾಮದ ಆಡಳಿತವು ಸರಪಂಚ್ (ಗ್ರಾಮದ ಅಧ್ಯಕ್ಷ) ಅವರ ಕೈಯಲ್ಲಿದೆ. ಅವರನ್ನು ಗ್ರಾಮದ ಜನರು ಚುನಾವಣೆಯ ಮೂಲಕ ನೇಮಿಸುತ್ತಾರೆ.

ಗ್ರಾಮದ ವಿಸ್ತೀರ್ಣ ೧೪೦೦.೯೫ ಹೆಕರೆಗಳು ಅಂದರೆ ೫೬೬.೯೯ ಹೆಕ್ಟೇರ್. ಕೃಷಿ ಸೇವಾ ವಲಯದಿಂದ ಆದಾಯ ಪ್ರತೀ ಕುಟುಂಬದ ಸರಾಸರಿ ಪ್ರತೀ ವರ್ಷಕ್ಕೆ ಒಂದು ಲಕ್ಷ ರೂಪಾಯಿಗಳು. ಪೆರ್ನೆಗೆ ಹತ್ತಿರದಲ್ಲಿರುವ ಪಟ್ಟಣವು ಪುತ್ತೂರು ಆಗಿದೆ, ಇದು ಪೆರ್ನೆಯಿಂದ ೧೨ ಕಿ.ಮೀ ದುರದಲ್ಲಿದೆ. ಪುತ್ತೂರಿನಿಂದ ಪೆರ್ನೆಗೆ ರಸ್ತೆ ಸಂಪರ್ಕ ವ್ಯಾಪಕವಾಗಿ ಇದೆ ಹಾಗೂ ಎಲ್ಲಾ ಕಡೆಯೂ ರಸ್ತೆ ಸಂಪರ್ಕಗಳು ವ್ಯಾಪಕವಾಗಿದೆ. ಪ್ರಧಾನಮಂತ್ರಿ ಗ್ರಾಮ ಸಡಕ್ ಹಾಗೂ ಅಂಬೇಡ್ಕರ್ ಯೋಜನೆಯ ಅನುದಾನದಲ್ಲಿ ಎಲ್ಲಾ ಭಾಗಗಳಲ್ಲಿಯೂ ರಸ್ತೆಗಳ ಸಂಪರ್ಕವನ್ನು ಕಲ್ಪಿಸಲಾಗಿದೆ.

ರೈಲು ಸಂಪರ್ಕ: ಕಬಕ (ಪುತ್ತೂರು) ರೈಲ್ವೆ ನಿಲ್ದಾಣವು ಪೆರ್ನೆಗೆ ಹತ್ತಿರವಾದ ರೈಲ್ವೆ ನಿಲ್ದಾಣವಾಗಿದೆ ಅಥವಾ ಪುತ್ತೂರು ರೈಲ್ವೆ ನಿಲ್ದಾಣವೂ ಹತ್ತಿರವಾಗುತ್ತದೆ. ಪೆರ್ನೆಯಿಂದ ರೈಲ್ವೆ ನಿಲ್ದಾಣಕ್ಕೆ ತಲುಪಬೇಕಾದರೆ ರಸ್ತೆ ಸಂಪರ್ಕದ ಮೂಲಕವೇ ತಲುಪಬೇಕು. ಆದರೆ ವೇಗಧೂತ ರೈಲುಗಳ ನಿಲುಗಡೆಯಿರುವುದಿಲ್ಲ. ಮುಖ್ಯ ರೈಲು ನಿಲ್ದಾಣವು ಮಂಗಳೂರು ಆಗಿದೆ ಇದು ಪೆರ್ನೆ ಗ್ರಾಮದಿಂದ ೪೨ ಕಿ. ಮೀ.ದೂರದಲ್ಲಿದೆ.

ಸಾಂಸ್ಥಿಕ ಸಂಸ್ಥೆಗಳು

ಗ್ರಾಮದಲ್ಲಿ ಯಾವುದೇ ಪದವಿ ಕಾಲೇಜುಗಳಿಲ್ಲ, ಒಂದು ಅನುದಾನಿತ ಪದವಿಪೂರ್ವ ಕಾಲೇಜು ಹಾಗೂ ಒಂದು ಅನಿದಾನಿತ ಪ್ರೌಢಶಾಲೆ ಇದೆ ಈ ಕಾಲೇಜುಗಳಲ್ಲಿ ೫೦೦ ವಿಧ್ಯಾರ್ಥಿಗಳು ವಿಧ್ಯಾರ್ಜನೆ ಮಾಡುತ್ತಿದ್ದಾರೆ. ಗ್ರಾಮದಲ್ಲಿ ಒಂದು ಪ್ರಾಥಮಿಕ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆ ಇಲ್ಲಿ ೧೦೦ ಮಕ್ಕಳು ವ್ಯಾಸಂಗ ಮಾಡುತ್ತಿದ್ದಾರೆ. ಒಂದು ಅನುದಾನಿತ ಕಿರಿಯ ಪ್ರಾಥಮಿಕ ಶಾಲೆ ಇದೆ, ಇಲ್ಲಿ ೯೫ ಮಕ್ಕಳು ವ್ಯಾಸಂಗ ಮಾಡಿತ್ತಿದ್ದಾರೆ. ಇವೆರಡೂ ಕನ್ನಡ ಮಾಧ್ಯಮ ಶಾಲೆಗಳಾಗಿವೆ.ಪೆರ್ನೆಯಲ್ಲಿ ಯಾವುದೇ ಆಂಗ್ಲ ಮಾಧ್ಯಮ ಶಾಲೆಗಳಿಲ್ಲ. ಗ್ರಾಮದಲ್ಲಿ ಎರಡು ಭಜನಾ ಮಂದಿರಗಳಿವೆ, ಗ್ರಾಮದ ಕೊರತಿಕಟ್ಟೆ ಎಂಬಲ್ಲಿ ಒಂದು ಪ್ರಾರ್ಥನಾ ಮಂದಿರವಿದೆ. ಹಾಗೂ ನಾಲ್ಕು ಅಂಗನವಾಡಿ ಕೇಂದ್ರಗಳಿವೆ. ಗ್ರಾಮದಲ್ಲಿ ಯಾವುದೇ ಮಸೀದಿಗಳಿಲ್ಲ.

ಜನಸಂಖ್ಯೆ ೨೦೧೧ ರ ಪ್ರಕಾರ ಅಂಕಿ ಅಂಶಗಳು ಕೋಷ್ಟಕ ೧.೧

| ಮಾಹಿತಿ | ಒಟ್ಟು | ಪುರುಷ | ಮಹಿಳಾ |
|---|---|---|---|
| ಒಟ್ಟು ಮನೆಗಳು | ೪೩೬ | – | – |
| ಜನಸಂಖ್ಯೆ | ೨೨೨೫ | ೧೦೯೩ | ೧೧೩೨ |
| ಮಕ್ಕಳು ೦–೬ ವರ್ಷದವರೆಗೆ | ೨೩೮ | ೧೨೧ | ೧೧೭ |
| ಎಸ್.ಸಿ | ೨೪೦ | ೧೨೬ | ೧೧೪ |
| ಎಸ್.ಟಿ. | ೨೪೭ | ೧೧೭ | ೧೩೦ |
| ಶಿಕ್ಷಣ ಪ್ರಮಾಣ(ಶೇಕಡಾವಾರು) | ೮೩.೪೯ | ೮೮.೬೮ | ೭೮.೫೨ |
| ಒಟ್ಟು ದುಡಿಮೆಗಾರರು | ೧೩೧೦ | ೭೦೦ | ೬೧೦ |
| ಮುಖ್ಯ ಕೆಲಸಗಾರರು(ದುಡಿಮೆಗಾರರು) | ೧೧೨೯ | ೦ | ೦ |
| ಅತಂತ್ರ ಕೆಲಸಗಾರರು | ೧೮೧ | ೬೩ | ೧೧೮ |

ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಎಸ್ .ಸಿ. ೧೦.೭೯ ಶೇಕಡಾ ಇದ್ದರೆ, ಎಸ್.ಟಿ. ೧೧.೧೦ ಶೇಕಡಾ ಇದ್ದಾರೆ. ಗ್ರಾಮದಲ್ಲಿ ಗೃಹಿಣಿಯರ ಸಂಖ್ಯೆಯು ಒಟ್ಟಾಗಿ ೬೩೦ ಇದೆ, ಇದರಲ್ಲಿ ಎಸ್.ಟಿ. ೫೯, ಎಸ್.ಸಿ.೫೧ ಮತ್ತು ಇತರ ಪಂಗಡಗಳೆಲ್ಲಾ ಸೇರಿ ೪೫೦ ಇದ್ದಾರೆ. ಗ್ರಾಮದಲ್ಲಿ ಗ್ರಾಮ ಪಂಚಾಯತ್ ಮುಖ್ಯ ಆಡಳಿತದ ಭಾಗವಾಗಿದೆ. ಈ ಗ್ರಾಮ ಪಂಚಾಯತ್‌ನಲ್ಲಿ ಒಟ್ಟು ೧೫ ಸದಸ್ಯರಿದ್ದಾರೆ, ಇವರೆಲ್ಲಾ ಜನರಿಂದ ಆರಿಸಲ್ಪಟ್ಟ ಪ್ರತಿನಿಧಿಗಳು, ಇದರಲ್ಲಿ ಒಬ್ಬರು ಅಧ್ಯಕ್ಷರು, ಒಬ್ಬರು ಉಪಾಧ್ಯಕ್ಷರು ಮತ್ತು ೧೩ ಸದಸ್ಯರಿದ್ದಾರೆ. ಇವರೆಲ್ಲರ ಅಧಿಕಾರದ ಅವಧಿ ೫ ವರ್ಷಗಳು. ಗ್ರಾಮವು ಪ್ರಾರಂಭದಲ್ಲಿ ಮಂಡಲ ಪಂಚಾಯತ್ ಅಸ್ಥಿತ್ವದಲ್ಲಿತ್ತು ತದನಂತರ ಹದಿನೈದು ವರ್ಷಗಳಿಂದೀಚೆಗೆ ಗ್ರಾಮಪಂಚಾಯತ್ ಆಗಿ ಮಾರ್ಪಡಾಯಿತು. ಗ್ರಾಮದಲ್ಲಿ ಪ್ರಥಮವಾಗಿ ವಾರ್ಡ್‌ಸಭೆ ಇರುತ್ತದೆ. ಆ ಸಭೆಯಲ್ಲಿ ಸದಸ್ಯರ ಬೇಡಿಕೆಗಳಿದ್ದರೆ ಪ್ರಥಮವಾಗಿ ಪಟ್ಟಿ ಮಾಡುತ್ತಾರೆ ಅದಾದನಂತರ ಆರು ತಿಂಗಳಿಗೊಮ್ಮೆ ಗ್ರಾಮಸಭೆಯನ್ನು ಆಯೋಜಿಸುತ್ತಾರೆ. ಆ ಗ್ರಾಮಸಭೆಯಲ್ಲಿ ಬೇಡಿಕೆ ಪಟ್ಟಿಯನ್ನು ತಯಾರಿಸಿ ನಿರ್ಣಯ ತೆಗೆದುಕೊಂಡು ಪ್ರತೀ ತಿಂಗಳಲ್ಲಿ ನಡೆಯುವ ಸಾಮಾನ್ಯ ಸಭೆಯಲ್ಲಿ ಆದ್ಯತೆಗೆ ಅನುಗುಣವಾಗಿ ನಿರ್ಣಯವನ್ನು ತೆಗೆದುಕೊಳ್ಳಲಾಗುತ್ತದೆ. ಅಧ್ಯಯನ ಪ್ರದೇಶದ ವ್ಯಾಪ್ತಿಯಲ್ಲಿ

ಪ್ರಾಥಮಿಕ ಪಶು ಚಿಕಿತ್ಸಾ ಕೇಂದ್ರ, ಬ್ಯಾಂಕಿಂಗ್ ವ್ಯವಸ್ಥೆ, ಸಹಕಾರಿ ಸಂಘ, ಹಾಲು ಉತ್ಪಾದಕರ ಸಹಕಾರಿ ಸಂಘ ಇವೆಲ್ಲವೂ ಇದೆ.

## ಸರಕಾರದ ಸೌಲಭ್ಯಗಳು

ಉದ್ಯೋಗ ಖಾತರಿ

ಈ ಯೋಜನೆಯಲ್ಲಿ ಗ್ರಾಮೀಣ ಭಾಗದ ನೋಂದಾಯಿತ ಬಡ ರೈತರಿಗೆ ಈ ಯೋಜನೆಯಡಿಯಲ್ಲಿ ಹತ್ತು ದಿನಗಳ ಉದ್ಯೋಗವನ್ನು ಕೊಡಲಾಗುವುದು.ಇವರಿಗೆ ಕೆಲಸದ ಸಮಯದಲ್ಲಿ ಪ್ರತೀ ದಿನಕ್ಕೆ ೨೨೫ ರೂಪಾಯಿಗಳ ವೇತನವನ್ನು ನಿಗದಿ ಮಾಡಲಾಗಿರುತ್ತದೆ.ಇವರು ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಕೆಲಸ ಮಾಡಬೇಕಾಗುತ್ತದೆ.  ಗ್ರಾಮದಲ್ಲಿ ಈ ಯೋಜನೆಯಲ್ಲಿ ನೋಂದಾಯಿಸಲ್ಪಟ್ಟ ಒಟ್ಟು ಸದಸ್ಯರ ಸಂಖ್ಯೆ  ೩೧೭, ಅದರಲ್ಲಿ ಎಸ್.ಸಿ. ೧೫೪, ಎಸ್.ಟಿ.೧೫೩ ಹಾಗೂ ಇತರ ಪಂಗಡದವರು ೧೦ ತಮ್ಮ ಹೆಸರನ್ನು ನೋಂದಾಯಿಸಿದ್ದಾರೆ.

ಗ್ರಾಮ ಪಂಚಾಯತ್‌ನಿಂದ ಸಿಗುವಂತಹ ಸೌಲಭ್ಯಗಳು

ಕೃಷಿಗೆ ಸಂಬಂಧಪಟ್ಟ ಉದ್ಯೋಗ ಖಾತರಿ ಯೋಜನೆಗಳು(ನರೇಗ) ವಸತಿ ಸೌಕರ್ಯಗಳ ಒದಗಿಸುವಿಕೆ ಇವುಗಳಲ್ಲಿ ಆಶ್ರಯ, ಇಂದಿರಾ ಆವಾಜ್, ಈಗಿನ ಪ್ರಚಲಿತ ಸಮಯದಲ್ಲಿ ಬಸವಸತಿ ಯೋಜನೆ.ಇದರಲ್ಲಿ ಫಲಾನುಭವಿಗಳಿಗೆ ೧೫೦೦೦೦ ರೂಪಾಯಿಗಳ ಹಣಕಾಸಿನ ನೆರವು ಲಭ್ಯವಿದೆ, ಇದರಲ್ಲಿ ೧೨೦೦೦೦ ರಾಜ್ಯ ಸರಕಾರದಿಂದ ಬಂದರೆ ೩೦೦೦೦ ಉದ್ಯೋಗ ಖಾತರಿ ಯೋಜನೆಗಳ ಮೂಲಕ ಬರುತ್ತದೆ. ರಸ್ತೆ ನಿರ್ಮಾಣಕ್ಕೆ ರಾಜ್ಯ ಸರಕಾರದ ಅನುದಾನದಿಂದ ಬರುವ ಹಣದಿಂದ ಆಧ್ಯತೆಗಳಿಗನುಗುಣವಾಗಿ ವ್ಯಯ ಮಾಡಲಾಗುವುದು . ಪಂಚಾಯತಿಯ ಸ್ವಂತ ನಿಧಿಯಿಂದ (ಸುಂಕ, ಮನೆತೆರಿಗೆ) ಇದರಲ್ಲಿ ೨೫% ನಷ್ಟು ಮೀಸಲಾತಿ ಎಸ್.ಸಿ. ಕುಟುಂಬದವರಿಗೆ ಮನೆ ದುರಸ್ತಿಗೆ ಹಾಗೂ ಮೂಲ ಸೌಕರ್ಯ ಪೂರೈಕೆಗೆ ಉಪಯೋಗಿಸಲಾಗುತ್ತದೆ. ಅಂಗವಿಕಲರಿಗೆ  ಶ್ರವಣ ಪರಿಕರ ಅಥವಾ ವೀಲ್ ಚೆಯರ್ ನೀಡಲಾಗುತ್ತದೆ. ವರ್ಷದಲ್ಲಿ ಎರಡು ಸಲ ಆರು ತಿಂಗಳಿಗೊಮ್ಮೆ ಗ್ರಾಮಸಭೆ ನಡೆಯುತ್ತದೆ ಇದರಲ್ಲಿ ಬೇಡಿಕೆಯನ್ನು ಸಂಗ್ರಹಿಸಿ ಆಧ್ಯತೆಯ ಮೇರೆಗೆ ವಿನಿಯೋಗಿಸಲಾಗುವುದು. ಯಾವುದೇ ನಿರ್ಣಯಗಳು ಸಾಮಾನ್ಯ ಸಭೆಯಲ್ಲಿ ಸ್ಥಳೀಯ ಪ್ರತಿನಿಧಿಗಳ ಒಪ್ಪಿಗೆಯ ಮೇರೆಗೆ ಅಂಗೀಕೃತವಾಗಬೇಕು. ದಾರಿದೀಪ ಅಳವಡಿಕೆ, ನೀರು ಸರಬರಾಜು ಇತ್ಯಾದಿ. ಪ್ರಕೃತಿ ವಿಕೋಪದಿಂದ ಏನಾದರೂ ಸಂಭವಿಸಿದರೆ ತುರ್ತು ಪರಿಹಾರವಾಗಿ ನಿಗದಿತ ಮಿತಿಯೊಳಗೆ ೧೦೦೦ ರೂಪಾಯಿಗಳನ್ನು ಕೊಡುವುದು. ಸರಕಾರಿ ಜಾಗದಲ್ಲಿ ನಿವೇಶನ ಒದಗಿಸಿ ವಸತಿ ಸೌಕರ್ಯವನ್ನು ಕಲ್ಪಿಸುವುದು.

ಈ ಅಧ್ಯಾಯವು ಪೆರ್ನೆ ಗ್ರಾಮದ ಕ್ಷೇತ್ರ ಪರಿಚಯವನ್ನು ಸ್ಥೂಲವಾಗಿ ವಿವರಿಸುತ್ತದೆ ಇದರಿಂದ ಗ್ರಾಮದಲ್ಲಿ ಮುಂದಿನ ಅಧ್ಯಾಯದಲ್ಲಿ ಗ್ರಾಮದ ಜನರ ಭಾಗವಹಿಸುವಿಕೆ ಮತ್ತು ಅವರಿಗೆ ಸರಕಾರದಿಂದ ಸಿಗುವಂತಹ ಸೌಲಭ್ಯಗಳನ್ನು ಚರ್ಚಿಸಲಾಗುವುದು.

# ಅಧ್ಯಾಯ ೩ ಅಸಂಘಟಿತ ಕಾರ್ಮಿಕರಿಗೆ ಸರಕಾರದಿಂದ ಸಿಗುವ ಸೌಲಭ್ಯಗಳು

ಹಿಂದಿನ ಅಧ್ಯಾಯದಲ್ಲಿ ಪೆರ್ನೆ ಗ್ರಾಮದ ಕ್ಷೇತ್ರ ಪರಿಚಯವನ್ನು ಮಾಡಲಾಯಿತು ಆದರೆ ಈ ಅಧ್ಯಾಯವು ಅಸಂಘಟಿತ ಕಾರ್ಮಿಕರಿಗೆ ಸರಕಾರದಿಂದ ಸಿಗುವ ಸವಲತ್ತುಗಳನ್ನು ವಿವರಿಸಲಾಗಿದೆ.

ಅಸಂಘಟಿತ ಕಾರ್ಮಿಕರ ಒಂದು ಭಾಗ ಕಟ್ಟಡ ಕಾರ್ಮಿಕರು ದೇಶದಲ್ಲಿ ಸುಮಾರು ೪.೪ ಕೋ ಕಟ್ಟಡ ಕಾರ್ಮಿಕರಿದ್ದಾರೆಂದು ತಿಳಿಸಲಾಗಿದೆ . ದೀರ್ಘಕಾಲದ ಹೋರಾಟಗಳ ನಂತರ ಭಾರತ ಸರ್ಕಾರ ೧೯೯೬ ರಲ್ಲಿ ಕಟ್ಟಡ ಹಾಗೂ ಇತರ ನಿರ್ಮಾಣ ಕಾರ್ಯದ ಕಾರ್ಮಿಕರ (ಉದ್ಯೋಗ ನಿಯಂತ್ರಣ ಹಾಗೂ ಸೇವಾ ಷರತ್ತುಗಳ ) ಕಾಯಿದೆಯನ್ನು ಜಾರಿಗೆ ತಂದಿತು. ಆದರೆ ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಇತರೆ ೪೦ ಕೋಟಿ ಕಾರ್ಮಿಕರಿಗಾಗಿ ಯಾವುದೇ ಕಾನೂನು ತರಲಿಲ್ಲ ಬದಲಾಗಿ ಕೆಲವು ಯೋಜನೆಗಳನ್ನು ತರಲಾಯಿತು ಅವುಗಳೆಂದರೆ

೧) ಅಸಂಘಟಿತ ಕಾರ್ಮಿಕರ ಕಲ್ಯಾಣ ಯೋಜನೆಗಳು

1. ನವಜೇತನ ಯೋಜನೆ
2. ಸ್ವಾವಲಂಚನೆ ಯೋಜನೆ
3. ಜನಶ್ರೀ ಭೀಮಾ ಯೋಜನೆ

(ಆಮ್ ಆದ್ಮಿ ಯೋಜನೆ)

**೧. ನವಚೇತನ ಯೋಜನೆ :**

**ಸರ್ಕಾರಿ ಯೋಜನೆಗಳು:**

ನವಚೇತನ ಯೋಜನೆಯು ವಿವಿಧ ತರಬೇತಿ ಕಾರ್ಯಕ್ರಮಗಳನ್ನು ನೀಡುವುದರ ಮೂಲಕ ಸ್ವ ಉದ್ಯೋಗ ನೀಡುವ ಗುರಿ – ಮರಗೆಲಸ, ಫಿಟ್ಟರ್, ಬೆಸುಗೆಗಾರರು, ಕೊಳಲು ಗಿರಣಿ, ಲೇಥ್, ಆಟೋಮೊಬೈಲ್, ಸಿದ್ಧ ಉಡುಪು, ಹೋಟೆಲ್ ಉದ್ದಿಮೆ, ಚರ್ಮದ ಉದ್ದಿಮೆ, ಐಟಿ ಸೆಕ್ಟರ್, ಎಸ್ಸಿ ಯುವಕರ ಕಲ್ಯಾಣ, ಹಾರ್ಡ್‌ವೇರ್ ಸೆಕ್ಟರ್, ಟಿ.ವಿ ರಿಪೇರಿ, ಪರದೆಯ ಮುದ್ರಣ ಇತ್ಯಾದಿ ಅವರಿಗೆ ಅನ್ವಯವಾಗಿರುತ್ತದೆ.

**ಅರ್ಹತೆ :**

ಅವಳು/ಅವನು ಪರಿಶಿಷ್ಟ ಜಾತಿಗೆ ಸೇರಿದ ನಿರುದ್ಯೋಗಿ ಆಗಿರಬೇಕು ಅವಳು/ಅವನು ಸ್ಥಳೀಯ ಉದ್ಯೋಗ ವಿನಿಮಯದಲ್ಲಿ ತಮ್ಮ ಹೆಸರು ನೊಂದಾವಣಿ ಮಾಡಿರಬೇಕು. ೧೮ ರಿಂದ ೩೫ರ ವಯಸ್ಸಿನೊಳಗಾಗಿರ ಬೇಕು ಬೇರೆ ಯಾವುದೇ ಸರಕರಿ ಸಂಸ್ಥೆಗಳ ಅಡಿಯಲ್ಲಿ ತರಬೇತಿ ಪಡೆದುಕೊಂಡಿರಬಾರದು ಪೆನ್ಷನ್ ವ್ಯವಸ್ಥೆಗೆ

ನೀಡುತ್ತಾರೋ ಅವರಿಗೆ ಲಭ್ಯವಾಗಿರುತ್ತದೆ. ವಹಿವಾಟು ಸಂಬಂದಿಸಿದಂತೆ ಉಚಿತ ತರಬೇತಿ ಕಾರ್ಯಕ್ರಮಗಳನ್ನು ಮತ್ತು ವಿದ್ಯಾರ್ಥಿ ವೇತನಗಳನ್ನು ನೀಡಲಾಗುತ್ತದೆ .ಪರಿಶಿಷ್ಟ ಜಾತಿ ಪ್ರಮಾಣ ಪತ್ರ ಮತ್ತು ಪಾನ್ ಕಾರ್ಡ್‌ನಂತಹ ದಾಖಲಾತಿಗಳು ಬೇಕಾಗುತ್ತದೆ.

**೨. ಸ್ವಾವಲಂಬನೆ ಯೋಜನೆ**

**ಸರ್ಕಾರಿ ಯೋಜನೆಗಳು**

ಭಾರತದಲ್ಲಿ ಅಸಂಘಟಿತ ವಲಯಕ್ಕೆ ಪಿಂಚಣಿ ಯೋಜನೆ ಒದಗಿಸಲು ಯತ್ನಿಸುತ್ತದೆ. ಅಸಂಘಟಿತ ವಲಯದ ಎಲ್ಲಾ ನಾಗರಿಕರಿಗೆ ಯಾರು ಮಧ್ಯಂತರ ಪೆನ್ಷನ್ ಫಂಡ್ ನಿಯಂತ್ರಣ ಅಭಿವೃದ್ಧಿ ಪ್ರಾಧಿಕಾರ ಆಡಳಿತ ನ್ಯೂ ಪೆನ್ಷನ್ ವ್ಯವಸ್ಥೆಗೆ (ಎನ್ ಪಿ ಎಸ್) ಸೇರಿದ್ದಾರೋ ಅವರಿಗೆ ಅನ್ವಯವಾಗುತ್ತದೆ

**ಅರ್ಹತೆ**

ಕೇಂದ್ರ ಸರಕಾರದ ಈ ಕೊಡುಗೆಯು ಅಸಂಘಟಿತ ವಲೌಅದ ಎಲ್ಲಾ ವ್ಯಕ್ತಿಗಳಿಗೆ ಯಾರು ಕನಿಷ್ಠ ರೂ. ೧,೦೦೦/- ಮತ್ತು ಗರಿಷ್ಠ ರೂ. ೧೨,೦೦೦/- ನ್ಯೂ ಪೆನ್ಷನ್ ವ್ಯವಸ್ಥೆಗೆ ನೀಡುತ್ತಾರೋ, ಶ್ರೇಣಿ ೧ ಮತ್ತು ೨ ಎರಡೂ ವ್ಯಕ್ತಿಗೆ ಕನಿಷ್ಟ ರೂ. ೧,೦೦೦/- ವರ್ಷಕ್ಕೆ ನ್ಯೂ ಪೆನ್ಷನ್ ವ್ಯವಸ್ಥೆಗೆ ನೀಡುತ್ತಾರೋ ಅವರಿಗೆ ಲಭ್ಯವಾಗಿರುತ್ತದೆ. ಭಾರತ ಸರ್ಕಾರದ ಅನುದಾನವನ್ನು ಚಂದಾದರಾರ ಖಾತೆಯಲ್ಲಿ ಮಾಸಿಕವಾಗಿ ಪಾವತಿಸಲಾಗುವುದು.

ವಾಸವಾಗಿದ್ದ ಪ್ರಮಣ ಪತ್ರ ,ವಯಸ್ಸಿನ ಪ್ರಮಾಣ ಪತ್ರ ,ಬಿಪಿಎಲ್ ಕುಟುಂಬಕ್ಕೆ ಸೇರಿದ ಪುರಾವೆ ,ಪಾನ್ ಕಾರ್ಡ್‌ನಂತಹ ದಾಖಲಾತಿಗಳು ಬೇಕಾಗುತ್ತದೆ.

**೩. ಜನಶ್ರೀ ಭೀಮಾ ಯೋಜನೆ (ಆಮ್ ಆದ್ಮಿ ಯೋಜನೆ)**

**ಸರ್ಕಾರಿ ಯೋಜನೆಗಳು**

ಈ ಯೋಜನೆಯು ಭಾರತ ಜೀವ ವಿಮಾ ನಿಗಮ (ಎಲ್ ಐ ಸಿ) ಇವರ ಜೊತೆಸೇರಿ ಸ್ವಾಭಾವಿಕ ಸಾವು, ಆಕಸ್ಮಿಕ ಸಾವು, ಭಾಗಶಃ ಅಥವಾ ಅಸಾಮರ್ಥ್ಯ ವಿರುದ್ಧ ಧನಸಹಾಯದ ಗುರಿ, ಗ್ರಾಮ ಪಂಚಾಯತ್, ಸ್ವಸಹಾಯ, ಸಂಘಗಳು, ಯೂನಿಯನ್ಸ್ ಇತ್ಯಾದಿ ಕೆಲವು ಸಂಘಟನೆಗಳು ಈ ವ್ಯಕ್ತಿಗಳು ಮತ್ತು ಎಲ್ ಐ ಸಿಯ ಮಧ್ಯವರ್ತಿಯಾಗಿ ಕಾರ್ಯ ನಿರ್ವಹಿಸುತ್ತದೆ.

ಈ ಜನಶ್ರೀ ಭೀಮಾ ಯೋಜನೆಯನ್ನು ಈಗ ಆಮ್ ಆದ್ಮಿ ಯೋಜನೆ ಎಂದು ಕರೆಯಲಾಗುತ್ತಿದೆ.

**ಅರ್ಹತೆ**

ಸದಸ್ಯರು ೧೮–೫೯ವರ್ಷ ವಯಸ್ಸಿನವರು ಆಗಿರಬೇಕು. ಪುರುಷರು ಮತ್ತು ಮಹಿಳೆಯರು ಇಬ್ಬರು ಅರ್ಹರಾಗುತ್ತರೆ. ೪೪ ನಿಗದಿತ ಔದ್ಯೋಗಿಕ ಗುಂಪಿನೊಳಗಿರಬೇಕು. ಬಿಪಿಎಲ್ ವ್ಯಕ್ತಿಗಳು ಮತ್ತು ಕಡಿಮೆ ಅಂದರೆ ಒಂದು ಗುಂಪಲ್ಲಿ ೨೫ ಜನಸಂಖ್ಯೆ ಇರಬೇಕು. ಆನ್ಮದಿಂದ ಅಂಗವೀಕಲತೆ ಉಳ್ಳವರು, ಅಪಘಾತಗೊಳಪಟ್ಟು ಅಂಗವಿಕಲತೆ ಪಡೆದುಕೊಂಡವರು ಅಂಗವೈಕಲತೆ ಲಾಭಕ್ಕೆ ಅರ್ಹರಾಗಿರುತ್ತಾರೆ.

**ಆರ್ಥಿಕ ನೆರವು**

ಕೋಷ್ಟಕ ೩.೧ ರಲ್ಲಿ ಜೀವ ವಿಮಾ ಕೆಳಗಿನ ಅನುಕೂಲತೆಗಳನ್ನು ನೀಡುತ್ತದೆ.

| | |
|---|---|
| ಸ್ವಾಭಾವಿಕ ಸಾವು | ರೂ. ೩೦,೦೦೦/– |
| ಅಪಘಾತಕ್ಕೊಳಗಾಗಿ ಸಾವು | ರೂ. ೭೫,೦೦೦/– |
| ಅಪಘಾತಕ್ಕೊಳಗಾಗಿ ಎರಡು ಕಣ್ಣು / ಕಾಲು / ಕೈಗಳನ್ನು ಕಳೆದುಕೊಂಡು ಶಾಶ್ವಾತವಾಗಿ ಅಂಗಿವೈಕಲ್ಯತೆ ಪಡೆದುಕೊಂಡರೆ | ರೂ. ೭೫,೦೦೦/– |
| ಒಂದು ಕಣ್ಣು / ಕಾಲು/ಕೈ ಕಳೆದುಕೊಂದು ಭಾಗಶಃ ಅಂಗವೈಕಲ್ಯತೆ ಪಡೆಕೊಂಡರೆ | ರೂ. ೩೭,೫೦೦/– |

**ಬೇಕಾದ ದಾಖಲೆಗಳು**

ಶಾಲೆಯ ಪ್ರಮಾಣ ಪತ್ರ ಅಥವಾ ಪಡಿತ ಚೀಟಿ ಅಥವ ಮತದಾರರ ಚೀಟಿ ಬಿಪಿಎಲ್ ಕಾರ್ಡ್ ಅಥವಾ ಆದಾಯ ಪ್ರಮಾಣ ಪತ್ರ ಹಿಂದಿನ ವರ್ಷದ ಪ್ರಮಾಣ ಪತ್ರ ಹಾಗೂ ವಿದ್ಯಾರ್ಥಿ ವೇತನ ಅರ್ಜಿ ಬ್ಯಾಂಕ್ ಸದಸ್ಯರ ಖಾತೆ ಹಾಗೂ ನಾಮಿನಿಗಳ ವಿವರ ಎನ್.ಜಿಒ ಪ್ರತಿ ಸದಸ್ಯರ ಪರವಾಗಿ ಒಟ್ಟು ಪ್ರೀಮಿಯಂ ಮೊತ್ತ ಅಥವಾ ಅದರ ೫೦% (ಪ್ರತಿ ಸದಸ್ಯರಿಗೆ ೧೦೦ರೂ.) ಚೆಕ್ ಅಥವಾ ಡಿಡಿ ಮೂಲಕ ಪಾವತಿಸಬೇಕು.

ಅ) ಅಲ್ಪಸಂಖ್ಯಾತರಿಗೆ ಶಿಕ್ಷಣ ಇಲಾಖೆಗೆ ಸಂಬಂಧಪಟ್ಟ ಕೇಂದ್ರ ಮತ್ತು ರಾಜ್ಯ ಸರಕಾರದಿಂದ

ದೊರಕುವ ವಿವಿಧ ಯೋಜನೆಗಳು

ವಿದ್ಯಾರ್ಥಿಗಳಿಗೆ ಮೆಟ್ರಿಕ್ ಪೂರ್ವ ಸ್ಕಾಲರ್ ಶಿಪ್

೧. ಸರಕಾರಿ ವಿದ್ಯಾರ್ಥಿ ವೇತನ ಶುಲ್ಕ ರಹಿತ (ಒಬಿಸಿ)

೨. ಭಾರತ ಸರಕಾರ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ.

೩. ಭಾರತ ಸರಕಾರ ಮೆಟ್ರಿಕೋತ್ತರ್ ವಿದ್ಯಾರ್ಥಿ ವೇತನ.

೪. ಮೆರಿಟ್ ಕಮ್ ಮೀನ್ಸ್ ವಿದ್ಯಾರ್ಥಿ ವೇತನ.

೫. ಕೇಂದ್ರ ಸರಕಾರದಿಂದ ವಿವಿದ ವಿದ್ಯಾರ್ಥಿವೇತನ ಯೋಜನೆಗಳು (ಎಲ್ಲರಿಗೂ)

೬. ಶ್ಲಾಘನೀಯ ಬಾಲಕಿಯರಿಗೆ ರಾಷ್ಟೀಯ ಮೌಲನಾ ಅಜಾದ್ ವಿದ್ಯಾರ್ಥಿವೇತನ.

೭. ಆಲ್ಪಸಂಖ್ಯಾತ ಪ್ರೇರಣಾ ನಿಧಿ.

೮. ಸಂಚಿ ಹೊನ್ನಮ್ಮ ವಿದ್ಯಾರ್ಥಿ ವೇತನ.

೯. ವೃತ್ತಿದಾರರ ಮಕ್ಕಳಿಗೆ ವಿದ್ಯಾರ್ಥಿ ವೇತನ.

೧೦. ಬೀಡಿ ವೃತ್ತಿಯವರ ಮಕ್ಕಳಿಗೆ ವಿದ್ಯಾರ್ಥಿ ವೇತನ.

೧೧. ಮುಸ್ಲಿಂ ಮಹಿಳೆಯರ ಅಭಿವೃದ್ಧಿಗೆ ಮುಖ್ಯವಾಗಿ ಅವರ ವಿದ್ಯಾಭ್ಯಾಸಕ್ಕೆ –ವೃತ್ತಿಗಳಿಗೆ ಹಾಗೂ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಭಾಗವಹಿಸಲು

೧೨. ಕೇಂದ್ರ ಸರಕಾರದಿಂದ ಶುಲ್ಕರಹಿತ ಕೋಚಿಂಗ್ ಮತ್ತು ಉಳಿದ ನೆರವು ಮಕ್ಕಳ ಜ್ಞಾನ ವೃದ್ಧಿಸಲು ಕೌಶಲ್ಯ ಮತ್ತು ಅರ್ಹತೆ, ಸರಕಾರ ಮತ್ತು ಸಾರ್ವಜನಿಕ ಉದ್ಯೋಗ ಹಾಗೂ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ.

೧೩. ವಿದೇಶದಲ್ಲಿ ಉನ್ನತ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ.

೧೪. ಅರಿವು ಯೋಜನೆ.

೧೫. ಕೇಂದ್ರ ಸರಕಾರದಿಂದ ರಾಷ್ಟ್ರೀಯ ಅಲ್ಪಸಂಖ್ಯಾತರ ಅಬಿವೃದ್ಧಿ ಹಾಗೂ ನಿಗಮದ ಯೋಜನೆಗಳು

೧೬. ಶಾದಿ ಭಾಗ್ಯ (ಹೆಣ್ಣು ಮಕ್ಕಳಿಗೆ)

ಕೋಷ್ಟಕ ೩.೨ ರಲ್ಲಿ ವಿವರಣೆಗಳನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ಸರಕಾರಿ ಯೋಜನೆಗಳು | ಅರ್ಹತೆ | ಆರ್ಥಿಕ ನೆರವು | ಬೇಕಾದ ದಾಖಲೆಗಳು |
|---|---|---|---|---|
| ೧. | ಸರಕಾರಿ ವಿದ್ಯಾರ್ಥಿ ವೇತನ ಶುಲ್ಕ ರಹಿತ (ಒಬಿಸಿ) | ಒಬಿಸಿ ವಿದ್ಯಾರ್ಥಿಗಳಿಗೆ ಯಾರ ವಾರ್ಷಿಕ ಆದಾಯ ೧,೦೦,೦೦೦/- ಗಿಂತ ಕಡಿಮೆ ಇದೆ | ತರಗತಿಗಳು:<br>೧-೫ ರೂ. ೭೫೦/-<br>೩-೭ ರೂ. ೨೫೦೦/-<br>೯-೧೦ ರೂ. ೩೦೦೦/-<br>೯-೧೦ ರೂ. ೧೦೦೦/- | ೩ ಬಿ ಜಾತಿ ಪ್ರಮಾಣ ಪತ್ರ<br>ಆದಾಯ ಪ್ರಮಾಣ ಪತೆ<br>ಶಾಲಾ ಕಾಲೇಜುಗಳಲ್ಲಿ ಸ್ವೀಕರಿಸಲಾಗಿದೆ |
| ೨. | ಭಾರತ ಸರಕಾರದ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ ಜೂನ್ ತಿಂಗಳಲ್ಲಿ ಅರ್ಜಿ ಸಲ್ಲಿಸಲು ಆರಂಭ ಜುಲಾಯಿ ೨೦ರ ತನಕ | ೧-೧೦ ವ್ಯಾಸಂಗ ಮಾಡುವ ಎಲ್ಲಾ ವಿದ್ಯಾರ್ಥಿಗಳಿಗೆ ೫೦% ಅಂಕಗಳಿದ್ದು ವಾರ್ಷಿಕ ಆದಾಯ ರೂ.೧ ಲಕ್ಷಗಿಂತ ಕಡಿಮೆ ಇರತಕ್ಕದ್ದು | ಶಾಲೆಯ ಪ್ರವೇಶ ಶುಲ್ಕ- ೫೦೦/-<br>ಟ್ಯೂಶ ಶುಲ್ಕ ರೂ. ೩೫೦/-<br>ಇತರ ಖರ್ಚು ರೂ ೬೦೦/-<br>೧ ರಿಂದ ೫ನೇ ತರಗತಿಯವರೆಗೆ ಒಂದು ವರ್ಷಕ್ಕೆ ರೂ. ೧೦೦೦/-<br>೬ ರಿಂದ ೧೦ನೇ ತರಗತಿಯವರೆಗೆ ರೂ.೫೦೦೦/- | ಜನ್ಮ ದೃಢೀಕರಣ ಪತ್ರ<br>ಜಾತಿ ಪ್ರಮಾಣ ಪತ್ರ<br>ಶಾಲೆಯಿಂದ ದೃಢೀಕರಣ ಪತ್ರ<br>ಜುಲಾಯಿ ತಿಂಗಳೊಳಗೆ ಕೊಡತಕ್ಕದ್ದು<br>ಹಿಂದಿನ ತರಗತಿಯ ಅಂಕ ಪಟ್ಟಿ |
| ೩. | ಭಾರತ ಸರಕಾರ ಮೆಟ್ರಿಕೋತ್ತರ ವಿದ್ಯಾರ್ಥಿ ವೇತನ ಜೂನ್ ತಿಂಗಳಲ್ಲಿ ಅರ್ಜಿ ಸಲ್ಲಿಸಲು ಆರಂಭ – ಆಗೋಸ್ಟ್ ೫ರ | ಪಿಯುಸಿ, ಡಿಪ್ಲೋಮ, ಪದವಿಪೂರ್ವ ಹಾಗೂ ಮೇಲ್ಪಟ್ಟ ವಿದ್ಯಾರ್ಥಿಗಳಿಗೆ ೫೦% ಅಂಕಗಳಿದ್ದು ವಾರ್ಷಿಕ ಆದಾಯ ರೂ. ೨ ಲಕ್ಷಿಗಿಂತ ಕಡಿಮೆ ಇರತಕ್ಕದ್ದು | ಪ್ರವೇಶ ಶುಲ್ಕ ಮತ್ತು ಓದುವ ಶುಲ್ಕವನ್ನು ಆಧರಿಸಿ ಗರಿಷ್ಠ ರೂ. ೩,೫೦೦/- ರಿಂದ ರೂ. ೭,೫೦೦/- ರವರೆಗೆ ಪ್ರತಿ ವರ್ಷಕ್ಕೆ | ಜನನ ಪ್ರಮಾಣ ಪತ್ರ<br>ಜಾತಿ ಪ್ರಮಾಣ ಪತ್ರ<br>ಶಿಕ್ಷಣ ಸಂಸ್ಥೆಯಿಂದ ದೃಢೀಕರಣ ಪತ್ರ<br>ಜುಲಾಯಿ ತಿಂಗಳೊಳಗೆ ಕೊಡತಕ್ಕದ್ದು. |

| | | | | |
|---|---|---|---|---|
| | ತನಕ | | | ಹಿಂದಿನ ತರಗತಿಯ ಅಂಕ ಪಟ್ಟಿ. |
| 4. | ಮೆರಿಟ್ ಕಮ್ ಮೀನ್ಸ್ (ಜೂನ್ ತಿಂಗಳಲ್ಲಿ ಅರ್ಜಿ ಸಲ್ಲಿಸಲು ಆರಂಭ ಸಪ್ಟೆಂಬರ್ ೩೦ ತಾರೀಖಿನ ಒಳಗೆ ಅರ್ಜಿ ಪೋಸ್ಟ್ ಮಾಡಬೇಕು) | ಪದವಿಪೂರ್ವ ಉತ್ತೀರ್ಣರಾಗಿ ವೃತ್ತಿಪರ ಶಿಕ್ಷಣಕ್ಕೆ ಹೋಗಲು ಇಚ್ಚಿಸುವವರು ೫೦% ಅಂಕಗಳಿದ್ದು ಆದಾಯ ರೂ.೨.೫ಲಕ್ಷಗಿಂತ ಕಡಿಮೆ ಇರತಕ್ಕದ್ದು. | ರೂ.೨೫,೦೦ ರಷ್ಟು ಹೆಣ್ಣು ಮಕ್ಕಳಿಗೆ ೩೦% ರಷ್ಟು ವಿದ್ಯಾರ್ಥಿ ವೇತನವನ್ನು ಮೀಸಲಾಗಿರಿಸಿದೆ. | ೧೦ನೇ + ಪಿಯುಸಿ ಅಂಕ ಪಟ್ಟಿಮ್ ಜಾತಿ ಪ್ರಮಾಣ ಪತ್ರ ಖರ್ಚು ವೆಚ್ಚದ ಪ್ರಮಾಣ ಪತ್ರ ಜಾತಿ ಪ್ರಮಾಣ ಪತ್ರ ಆದಾಯ ಪ್ರಮಾಣ ಪತ್ರ ಕಾಲೇಜಿಗೆ ಸೇರಿದ ದೃಢೀಕರಣ ಪತ್ರ ಹಿಂದಿನ ತರಗತಿಯ ಅಂಕ ಪಟ್ಟಿ. |
| 5. | ಕೇಂದ್ರ ಸರಕಾರದಿಂದ ವಿವಿಧ ವಿದ್ಯಾರ್ಥಿ ವೇತನ ಯೋಜನೆಗಳು (ಎಲ್ಲರಿಗೂ) ಸಪ್ಟೆಂಬರ್ ಅಕ್ಟೋಬರ್ ತಿಂಗಳಲ್ಲಿ ಅರ್ಜಿ ಸಲ್ಲಿಸಬಹುದು | ಪದವಿ ಪೂರ್ವ ಉತ್ತೀರ್ಣರಾಗಿ ಮೇಲ್ಪಟ್ಟು ಶಿಕ್ಷಣಕ್ಕೆ ಹೋಗಲು ಇಚ್ಚಿಸುವ ವಿದ್ಯಾರ್ಥಿಗಳಿಗೆ ಪದವಿಪೂರ್ವದಲ್ಲಿ ೮೦% ಅಂಕಗಳಿದ್ದು ಕುಟುಂಬದ ಆದಾಯ ರೂ.೪.೫ ಲಕ್ಷಗಿಂತ ಕಡಿಮೆ ಇದ್ದಲ್ಲಿ | ರೂ. ೨೫,೦೦೦/- ಗಿಂತ ಮೇಲ್ಪಟ್ಟು | ಪಿಯುಸಿ ಅಂಕಪಟ್ಟಿ ಜಾತಿ ಪ್ರಮಾಣಪತ್ರ ಆದಾಯ ಪ್ರಮಾಣ ಪತ್ರ ಕಾಲೇಜಿಗೆ ಸೇರಿದ ದೃಢೀಕರಣ ಪತ್ರ |
| 6. | ಶ್ಲಾಘನೀಯ ಬಾಲಕಿಯರಿಗೆ ರಾಷ್ಟ್ರೀಯ ವಿದ್ಯಾರ್ಥಿವೇತನ (ಆಗೋಸ್ತ್ ೩ ತಾರೀಖಿನ ಒಳಗೆ ಅರ್ಜಿ ಪ್ರೋಸ್ಟ್ ಮಾಡಬೇಕು) | ಅಲ್ಪಸಂಖ್ಯಾತ, ಪಿ.ಯು.ಸಿ ಹೆಣ್ಣು ಮಕ್ಕಳಿಗೆ ೧೦ನೇ ತರಗತಿಯಲ್ಲಿ ೫೫% ಅಂಕಗಳಿದ್ದು, ಕುಟುಂಬದ ವಾರ್ಷಿಕ ಆದಾಯ ರೂ. ೧ ಲಕ್ಷಗಿಂತ ಕಡಿಮೆ ಇರತಕ್ಕದ್ದು ಆಗಸ್ಟ್ ತಿಂಗಳೊಳಗೆ ಅರ್ಜಿ ಸಲ್ಲಿಸಬೇಕು. | ರೂ. ೧೨,೦೦೦/- ಎಲ್ಲರಿಗೂ ೫೦:೫೦ ರೂ. ೬,೦೦೦/- ಪದವಿಪೂರ್ವ ವಿದ್ಯಾರ್ಥಿಗಳಿಗೆ | ಆದಾಯ ಮತ್ತು ಜಾತಿ ಪ್ರಮಾಣ ಪತ್ರ ೧೦ನೇ ತರಗತಿ ಅಂಕಪಟ್ಟಿ |
| 7. | ಅಲ್ಪಸಂಖ್ಯಾತ ಪ್ರೇರಣಾ ನಿಧಿ (ಆಗೋಸ್ಟ್ ತಿಂಗಳಲ್ಲಿ ಅರ್ಜಿ | ಪಿಯುಸಿ ಮತ್ತು ಡಿಗ್ರಿ ಶಿಕ್ಷಣಕ್ಕೆ ಮೆಟ್ರಿಕ್ ಮತ್ತು ಪಿಯುಸಿಯಲ್ಲಿ ೫೦% | ರೂ. ೧೦,೦೦೦/- ಗಿಂತ ಮೇಲ್ಪಟ್ಟು | ಆದಾಯ ಪ್ರಮಾಣ ಪತ್ರ ೧೦ನೇ ಮತ್ತು ಪಿಯುಸಿ ಅಂಕಪಟ್ಟಿ |

| | | | | |
|---|---|---|---|---|
| | ಸಲ್ಲಿಸ ಬಹುದು) | ಅಂಕಗಳಿರಬೇಕು ಆದಾಯ ರೂ.೨ ಲಕ್ಷಗಿಂತ ಕಡಿಮೆ ಇರತಕ್ಕದ್ದು | | |
| 8. | ಸಂಚಿ ಹೊನ್ನಮ್ಮ ವಿದ್ಯಾರ್ಥಿ ವೇತನ | ಉನ್ನತ ಶಿಕ್ಷಣ ಪಡೆಯಲು ಇಚ್ಚಿಸುವ ಹೆಣ್ಣು ಮಕ್ಕಳಿಗೆ ೬೦೫ ಪಿಯುಸಿ ಅಂಕಗಳು | ರೂ.೨,೦೦೦/- | ೧೦ನೇ ಮತ್ತು ಪಿಯುಸಿ ಅಂಕಪಟ್ಟಿ ಜುಲಾಯಿ ತಿಂಗಳಲ್ಲಿ |
| 9. | ವೃತ್ತಿದಾರರ ಮಕ್ಕಳಿಗೆ ವಿದ್ಯಾರ್ಥಿ ವೇತನ | ಲೋಹ, ಸಂಚಾರ ಇತ್ಯಾದಿ ವೃತ್ತಿದಾರರ ಮಕ್ಕಳಿಗೆ ರೂ. ೬೦,೦೦೦/- ಗಿಂತ ಕಡಿಮೆ ಆದಾಯ ಇರತಕ್ಕದ್ದು ೪೦% ಅಂಕಗಳಿದ್ದು | ರೂ. ೨,೫೦೦/- ಗಿಂತ ಮೇಲ್ಪಟ್ಟು | ೧೦ನೇ ಮತ್ತು ಪಿಯುಸಿ ಅಂಕಪಟ್ಟಿ ಪೋಷಕರ ವೃತ್ತಿ ದಾಖಲೆ ಜುಲಾಯಿ ತಿಂಗಳಲ್ಲಿ |
| 10. | ಬೀಡಿ ವೃತ್ತಿಯವರ ಮಕ್ಕಳಿಗೆ ವಿದ್ಯಾರ್ಥಿ ವೇತನ (ಜುಲಾಯಿ ತಿಂಗಳಲ್ಲಿ ಅರ್ಜಿ ಸಲ್ಲಿಸಬಹುದು) | ಎಲ್ಲಾ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಬೀಡಿ ಕಟ್ಟುವ ಪೋಷಕರ ಮಕ್ಕಳಿಗೆ ಆದಾಯ ಒಂದು ಲಕ್ಷಕ್ಕಿಂತ ಕಡಿಮೆ | ರೂ. ಕನಿಷ್ಠ ೨೫೦/- ರಿಂದ ೮,೦೦೦/- ತನಕ | ೧೦ನೇ ಮತ್ತು ಪಿಯುಸಿ ಅಂಕಪಟ್ಟಿ ಬೀಡಿ ಪಾಸ್ ಪುಸ್ತಕ ೪೦% ಅಂಕಗಳು |
| 11. | ಮುಸ್ಲಿಂ ಮಹಿಳೆಯರ ಅಭಿವೃದ್ಧಿಗೆ ಮುಖ್ಯವಾಗಿ ಅವರ ವಿಧ್ಯಾಭ್ಯಾಸಕ್ಕೆ ವೃತ್ತಿಗಳಿಗೆ ಹಾಗೂ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಭಾಗವಹಿಸಲು | ಹೆಣ್ಣು ಮಕ್ಕಳ ಪೋಷಕರ ವಾರ್ಷಿಕ ಆದಾಯ ರೂ. ೪೮,೦೦೦ ಕಡಿಮೆ ಇರತಕ್ಕದ್ದು | ವಿದ್ಯಾರ್ಥಿಗಳಿಗೆ ರೂ. ೧೦,೦೦೦/-<br>ಬಿಡಿಎಸ್ ವಿದ್ಯಾರ್ಥಿಗಳಿ ೧೫,೦೦೦/-<br>ಎಮ್.ಬಿ.ಎ. ವಿದ್ಯಾರ್ಥಿಗಳಿಗೆ ೧೦,೦೦೦/-<br>ಡಿ.ಎಡ್/ಬಿ.ಎಡ್ ರೂ. ೩,೦೦೦/-<br>ಬಿಸಿಎ ರೂ. ೫,೦೦೦/- | ಜಾತಿ ಪ್ರಮಾಣ ಪತ್ರ |
| 12. | ಕೇಂದ್ರ ಸರಕಾರದಿಂದ ಶುಲ್ಕರಹಿತ ಕೋಚಿಂಗ್ ಮತ್ತು ಉಳಿದ | ವಿದ್ಯಾರ್ಥಿಗಳು ಉತ್ತಮ ಅಂಕಗಳನ್ನು ಪಡೆದಿರಬೇಕು ಅಲ್ಪಸಂಖ್ಯಾತರು | ರೂ. ೨೦,೦೦೦/- ಪ್ರತಿ ತಿಂಗಳಿಗೆ ರೂ ೧೦,೦೦೦ ಗಳ ಹಾಜರಾತಿ ಭತ್ಯೆ | ಅಂಕಪಟ್ಟಿ<br>ಭಾವಚಿತ್ರ |

| | | | | |
|---|---|---|---|---|
| | ನೆರವು ಮಕ್ಕಳ ಜ್ಞಾನ ವೃದ್ಧಿಸಲು ಕೌಶಲ್ಯ ಮತ್ತು ಅರ್ಹತೆ ಸರಕಾರ ಮತ್ತು ಸಾರ್ವಜನಿಕ ಉದ್ಯೋಗ ಹಾಗೂ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ | ಆಗಿರಬೇಕು.<br>ವಾರ್ಷಿಕ ಆದಾಯ ರೂ. ೩ ಲಕ್ಷಗಿಂತ ಕಡಿಮೆ ಆಗಿರಬೇಕು | ಎಸ್.ಎಸ್.ಎಸ್.ಸಿ ರೂ ೫,೦೦೦/-<br>ಐಟಿಐ/ಡಿಪ್ಲೊಮ ರೂ. ೩೬೦೦/-<br>ಡಿಗ್ರಿ ಖೂ. ೩,೦೦೦/- | ನೋಂದಾಯಿಸಿದ ಪತ್ರ<br>ವಾರ್ಷಿಕ ಆದಾಯ ಪತ್ರ<br>ಸ್ಥರ ವಾಸ್ತವಿಕಾ ಪತ್ರ<br>ಭಾವ ಚಿತ್ರ |
| 13. | ವಿದೇಶದಲ್ಲಿ ಉನ್ನತ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ. ರಾಜ್ಯದ ಅಲ್ಪಸಂಖ್ಯಾತರ ವಿದ್ಯಾರ್ಥಿಗಳು ವಿದೇಶದ ವಿಶ್ವವಿದ್ಯಾನಿಲಯಗಳಲ್ಲಿ ಸ್ನಾತಕೋತ್ತರ,ಪಿ.ಹೆಚ್.ಡಿ ಮತ್ತು ಡೆಂಟಲ್ ಕೋರ್ಸ್ ಮುಂತಾದವುಗಳನ್ನು ವ್ಯಾಸಂಗ ಮಾಡಲು | ಪದವಿ ಪರೀಕ್ಷೆಗಳಲ್ಲಿ ಶೇ ೬೦ ಕ್ಕಿಂತ ಹೆಚ್ಚಿನ ಅಂಕಗಳಿಸಿರಬೇಕು. ಭಾರತೀಯ ಪ್ರಜೆ ಹಾಗೂ ಕರ್ನಾಟಕ ರಾಜ್ಯದಲ್ಲಿ ವಾಸವಾಗಿರಬೇಕು.<br>ಕುಟುಂಬದ ವಾರ್ಷಿಕ ವರಮಾನ ರೂ.೪ ಲಕ್ಷಕ್ಕಿಂತ ಕಡಿಮೆ ಇರಬೇಕು. ಆಯ್ಕೆಯಾದ ಅಭ್ಯರ್ಥಿಗಳಿಗೆ ವರ್ಷಕ್ಕೆ ಕನಿಷ್ಠ ರೂ. ೫ ಲಕ್ಷದಿಂದ ಗರಿಷ್ಠ ರೂ. ೧೦ ಲಕ್ಷದವರೆಗೆ ವಿದ್ಯಾರ್ಥಿವೇತನ ನೀಡಲಾಗುವುದು. | ೨ ವರ್ಷಗಳಿಗೆ ಗರಿಷ್ಠ ರೂ.೧೦ ಲಕ್ಷ ವಿದ್ಯಾರ್ಥಿವೇತನ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ | ಕುಟುಂಬದ ವಾರ್ಷಿಕ ವರಮಾನ ರೂ. ೪ ಲಕ್ಷಕ್ಕಿಂತ ಕಡಿಮೆ ಅಂಕಪಟ್ಟಿ ಭಾವಚಿತ್ರ ಸ್ಥಿರ ವಾಸ್ತವಿಕಾ ಪತ್ರ |
| 14. | ಅರಿವು ಯೋಜನೆ | ಉನ್ನತ ಶಿಕ್ಷಣಕ್ಕೆ ಹೋಗುವ ಅಲ್ಪ ಸಂಖ್ಯಾತರಿಗೆ (ಎಮ್.ಬಿ.ಬಿಎಸ್, ಇಂಜಿನಿಯರಿಂಗ್, ಡಿ.ಎಡ್, ಐ.ಟಿ.ಐ, | ರೂ. ೭೫,೦೦೦/- ಸಾಲ ನೀಡಲಾಗುವುದು ೨% ಬಡ್ಡಿ | ಆದಾಯ ಪ್ರಮಾಣ ಪತ್ರ<br>೧೦ನೇ ಪಿ.ಯು.ಸಿ ಮತ್ತು ಡಿಗ್ರಿಯ ಅಂಕಪಟ್ಟಿ<br>ಜಾತಿ ಆದಾಯ ಪ್ರಮಾಣ ಪತ್ರ. |

| | | | | |
|---|---|---|---|---|
| | | ನರ್ಸಿಂಗ್, ಎಮ್.ಬಿ.ಎ ವಿದ್ಯಾರ್ಥಿಗಳು) ಕುಟುಂಬದ ಆದಾಯ ರೂ. ೧ ಲಕ್ಷಗಿಂತ ಕಡಿಮೆ ಇರತಕ್ಕದ್ದು. ವಾರ್ಷಿಕ ರೂ. ೭೫,೦೦೦/- ಸಾಲ ನೀಡಲಾಗುವುದು. | | |
| 15. | ಕೇಂದ್ರ ಸರಕಾರದಿಂದ ರಾಷ್ಟ್ರೀಯ ಅಲ್ಪಸಂಖ್ಯಾತರ ಅಭಿವೃದ್ಧಿ ಹಾಗೂ ಹಣಕಾಸು ನಿಗಮದ ಯೋಜನೆಗಳು | ವಿದ್ಯಾರ್ಥಿಗಳು ಅಲ್ಪ ಸಂಖ್ಯಾತರ ವರ್ಗಕ್ಕೆ ಸೆಕ್ಷನ್ ೨ (೧೦) ರಾಷ್ಟ್ರೀಯ ಅಲ್ಪ ಸಂಖ್ಯಾತರ ಆಯೋಗ ಕಾಯಿದೆ ೧೯೯೨ ಪ್ರಕಾರ ಸೇರಿದವರಾಗಿರಬೇಕು.<br>ವಿದ್ಯಾರ್ಥಿಗಳು ತಮ್ಮ ಹೆಸರನ್ನು ಶಿಕ್ಷಣಕ್ಕೆ ಸಂಬಂಧಪಟ್ಟ ಶಿಕ್ಷಣ ಕ್ಷೇತ್ರದಲ್ಲಿ ನೊಂದಾಯಿಸಿ ಅಂಗೀಕರಿಸಬೇಕು | ವಿಧ್ಯಾಭ್ಯಾಸ ಸಾಲ ಯೋಜನೆಯಡಿ ಒಂದು ವರ್ಷದ ಉನ್ನತ ಕೌಶಲ್ಯ ಅಭಿವೃದ್ಧಿ ಯೋಜನೆಯಡಿ ಗರಿಷ್ಠ ೩ ಲಕ್ಷ ರೂ ವರೆಗೆ ಅಲ್ಪಾವಧಿ ಸಾಲ ಗರಿಷ್ಠ ೫ ವರ್ಷ ಅವಧಿಯ ವೃತ್ತಿಪರ ಕೋರ್ಸುಗಳಿಗೆ ಗರಿಷ್ಠ ೫ ವರ್ಷ ಅವಧಿಯ ವೃತ್ತಿಪರ ಕೋರ್ಸುಗಳಿಗೆ ಗರಿಷ್ಠ ೧೦ ಲಕ್ಷ ರೂ. ವರೆಗೆ ಸಾಲ, ಸ್ನಾತಕೋತರ ವೃತ್ತಿಪರ ಕೋರ್ಸ್‌ಗಳಿಗೆ ಗರಿಷ್ಠ ೫ ವರ್ಷ ಅವಧಿಯ ಕೋರ್ಸ್‌ಗಳಿಗೆ ಮಾಹೆಯಾನ ತರಬೇತಿ ವೆಚ್ಚ ೧ ಸಾವಿರದಿಂದ ೨ ಸಾವಿರ ರೂ. ವರೆಗೆ ಏರಿಕೆ. ಸ್ಟೈಫಂಡ್ ರೂ. ೫೦೦ ರಿಂದ ೧೦೦೦ ಕ್ಕೆ ಏರಿಕೆ | ೩ ಭಾವ ಚಿತ್ರ ಶಿಕ್ಷಣ ಕ್ಷೇತ್ರದಲ್ಲಿ ನೋಂದಾಯಿಸಿದ ಅರ್ಜಿ.<br>ಆದಾಯ ಪ್ರಮಾಣ ಪತ್ರ<br>ವಾಸವಾಗಿದ್ದ ಪ್ರಮಾಣ ಪತ್ರ<br>ಸಂಬಂಧಪಟ್ಟ ಶಿಕ್ಷಣ ಕ್ಷೇತ್ರದ ಮೇಲ್ವಿಚಾರಕರ ಪತ್ರ<br>ಜಾತಿ ಪ್ರಮಾಣ ಪತ್ರ<br>ಅಂಕ ಪಟ್ಟಿ |
| 16. | ಶಾದಿ ಭಾಗ್ಯ (ಹೆಣ್ಣು ಮಕ್ಕಳಿಗೆ) | ಆರ್ಥಿಕವಾಗಿ ಹಿಂದುಳಿದ ಅಲ್ಪಸಂಖ್ಯಾತರ | ರೂ. ೫೦,೦೦೦/- ಗಳು ವಧುವಿನ ಹೆಸರಿಗೆ | ನಿಗದಿತ ಮನೆಯಲ್ಲಿ ಅರ್ಜಿ, ವಧುವಿನ |

| | | | | |
|---|---|---|---|---|
| | | ಹೆಣ್ಣು ಮಕ್ಕಳಿಗೆ/ವಿಚ್ಛೇದಿತ ಮಹಿಳೆ ಮತ್ತು ವಿಧವೆಯರಿಗೆ ವೈಯಕ್ತಿಕ ಹಾಗೂ ಸಾಮೂಹಿಕ ಮದುವೆ ಕಾರ್ಯಗಳಿಗೆ ಸಹಾಯ ಧನ | ಚೆಕ್ ಅಥವಾ ರೂ. ೩೫,೦೦೦/- ದ ಬೆಲೆ ಬಾಳುವ ಆಡುಗೆ ಪಾತೆ, ಮಂಚ, ಹಾಸಿಗೆ ಅಲ್ಮೇರಾ ಹಾಗೂ ಇನ್ನಿತರ ಜೀವನಾವಶ್ಯಕ ಸಾಮಾಗ್ರಿಗಳು | ಕುಟುಂಬದ ವಾರ್ಷಿಕ ಆದಾಯ ಮತ್ತು ಆದಾಯ ಪ್ರಮಾಣ ಪತ್ರ (ಜೆರಾಕ್ಸ್ ಪ್ರತಿ ದೃಢೀಕೃತವಾಗಿರ ಬೇಕು) ವಧು ಮತ್ತು ವರನ ಜನನ ಪ್ರಮಾಣ ಪತ್ರ/ಎಸ್.ಎಸ್.ಎಲ್.ಸಿ/ಟಿ.ಸಿ/ನೋಟರಿಯಿಂದ ಪಡೆದ ಅಫಿದಾತ್. ಯಾವುದಾದರೊಂದು ದಾಖಲೆ (ಜೆರಾಕ್ಸ್ ಪ್ರತಿ ದೃಢೀಕೃತವಾಗಿರಬೇಕು) ರಾಜ್ಯದಲ್ಲಿ ಕನಿಷ್ಠ ೩ ವರ್ಷ ವಧು ವಾಸವಾಗಿರುವ ಬಗ್ಗೆ ದೃಢೀಕೃತ ದಾಖಲೆ ತಹಶೀಲ್ದಾರರಿಂದ ಪತ್ರ / ದೃಢೀಕೃತ ದಾಖಲೆ, ರೇಷನ್ ಕಾರ್ಡ್ / ಚುನಾವಣಾ ಆಯೋಗದ ಗುರುತಿನ ಚೀಟಿ/ ಡ್ರೈವಿಂಗ್ ಲೈಸನ್ಸ್ / ಆಧಾರ್ ಕಾರ್ಡ್) ಜೆರಾಕ್ಸ್ ಪ್ರತಿ ದೃಢೀಕೃತವಾಗಿರಬೇಕು) ಲಗತ್ತಿಸಿರುವ ನಮೂನೆಯಲ್ಲಿ ಪೂರ್ವಭಾವಿ ಘೋಷಣೆ ಪತ್ರ, ವಧುವಿನ ಭಾವಚಿತ್ರ. ಮದುವೆ ಲಗ್ನ ಪತ್ರಿಕೆ / ನಿಗಧಿಪಡಿಸಿದ ದಿನಾಂಕದ ಅಧಿಕೃತ ದಾಖಲೆ. ವಿಚ್ಛೇದಿತ ವರ/ವಧು ಅಗಿದ್ದಲ್ಲಿ, ವಿಚ್ಛೇದನೆ |

| | | | | |
|---|---|---|---|---|
| | | | | ಪಡೆದಿರುವುದಕ್ಕೆ ದೃಢೀಕೃತ ದಾಖಲಾತಿಗಳು. ವಿಧವೆಯಾಗಿದ್ದಲ್ಲಿ ಗಂಡನ ಮರಣ ಪ್ರಮಾಣ ಪತ್ರ ಸಲ್ಲಿಸುವುದು. ವಿಕಲಚೇತನರಿದ್ದರೆ ಅಂಗವಿಕಲರ ಪ್ರಮಾಣ ಪತ್ರ. ಮದುವೆ ನಂತರ ವಧುವರನ ಭಾವಚಿತ್ರ. ಧಾರ್ಮಿಕ ಸಂಸ್ಥೆ ನೀಡಿರುವ ಮದುವೆ ಪ್ರಮಾಣ ಪತ್ರ ಅಥವಾ ಉಪ ನೋಂದವಣಾಧಿಕಾರಿಗಳು ನೀಡಿರುವ ನೋಂದಾಣಿ ಪತ್ರ ನೀಡುವುದು. |

ಆ) ಕಟ್ಟಡ ಮತ್ತು ಇತರ ನಿರ್ಮಾಣ ಕಾರ್ಮಿಕರಿಗೆ ಆರೋಗ್ಯ ಇಲಾಖೆಯಿಂದ ದೊರಕುವ ಕೇಂದ್ರ ಮತ್ತು ರಾಜ್ಯ ಸರಕಾರದ ವಿವಿಧ ಯೋಜನೆಗಳು

(ನೋದಾಯಿಸಿದ ತಕ್ಷಣ ಫಲಾನುಭವಿಗೆ ಸಿಗುವ ಸೌಲಭ್ಯಗಳು)

೧. ಒಳಾರೋಗಿಯಾಗಿ ಧನ ಸಹಾಯ

೨. ವೈದ್ಯಕೀಯ ನೆರವು

೩. ಮೃತನ ಕುಟುಂಬಕ್ಕೆ ಅಂತ್ಯಕ್ರಿಯೆಗಾಗಿ ಆರ್ಥಿಕ ನೆರವು.

೪. ಅಪಘಾತ ಪರಿಹಾರ.

೫. ಮಾಹೆಯಾನ ವಿಕಲಾಂಗ ಪಿಂಚಣಿ.

೬. ನೋಂದಾಯಿತರಲ್ಲದ ಕಟ್ಟಡ ಕಾರ್ಮಿಕರು ನಿರ್ಮಾಣ ಹಂತದಲ್ಲಿರುವ ಕಟ್ಟಡ ಕುಸಿತದಿಂದ ಅಪಘಾತ ಉಂಟಾಗಿ ಮೃತರಾದಲ್ಲಿ ಅವರ ಕುಟುಂಬಕ್ಕೆ ಮತ್ತು ಗಂಭೀರ ಗಾಯಗೊಂಡ ನೋಂದಾಯಿತರಲ್ಲದ ಕಟ್ಟಡ ಕಾರ್ಮಿಕರಿಗೆ.

(ಒಂದು ವರ್ಷದ ಸದಸ್ಯತ್ವ ಪೂರ್ಣಗೊಂಡ ಫಲಾನುಭವಿಗೆ ದೊರಕುವ ಸೌಲಭ್ಯಗಳು)

೭. ಹೆರಿಗೆ ಸೌಲಭ್ಯ (ಮಹಿಳಾ ಫಲಾನುಭವಿಗೆ)

೮. ಶೈಕ್ಷಣಿಕ ಧನಸಹಾಯ (ಫಲಾನುಭವಿಯ ಮಕ್ಕಳಿಗೆ)

೯. ಮದುವೆಗೆ ಧನಸಹಾಯ

೧೦. ಉಪಕರಣಗಳ ಖರೀದಿಗೆ ಧನ ಸಹಾಯ.

(ಐದು ವರ್ಷ ಸದಸ್ಯತ್ವ ಪೂರ್ಣಗೊಂಡ ಫಲಾನುಭವಿಗೆ ದೊರಕುವ ಸೌಲಭ್ಯಗಳು)

೧೧. ಮಾಹೆಯಾನ ಪಿಂಚಣಿ (ಮಹಿಳಾ ಹಾಗೂ ಪುರುಷ ಕಾರ್ಮಿಕರಿಗೆ)

೧೨. ಸಾಲ ಸೌಲಭ್ಯ (ಫಲಾನುಭವಿಗೆ ಮನೆಕಟ್ಟುವುದಕ್ಕೆ / ಖರೀದಿಸುವುದಕ್ಕೆ)

ಕೋಷ್ಟಕ ೩.೩ ರಲ್ಲಿ ವಿವರಣೆಯನ್ನು ನೀಡಲಾಗಿದೆ.

| ಕ್ರಮ.ಸಂಖ್ಯೆ | ಸರಕಾರಿ ಯೋಜನೆಗಳು | ಅರ್ಹತೆ | ಆರ್ಥಿಕ ನೆರವು | ಬೇಕಾದ ದಾಖಲೆಗಳು |
|---|---|---|---|---|
| ೧. | ಒಳರೊಗಿಯಾಗಿ ಧನ ಸಹಾಯ ಧನ ಸಹಾಯ ಸರ್ಕಾರಿ ಮತ್ತು ಸರ್ಕಾರದಿಂದ ಮಾನ್ಯತೆ ಪಡೆದ ಆಸ್ಪತ್ರೆಯಲ್ಲಿ ಒಳರೋಗಿಯಾಗಿ ಚಿಕಿತ್ಸೆ ಪಡೆದುದಕ್ಕೆ | ೧೮–೬೦ ವರ್ಷದೊಳಗಿನವರೆಗೆ ಎಲ್ಲಾ ಕಟ್ಟಡ ಕಾರ್ಮಿಕರಿಗೆ | ರೂ. ೪೦೦/– ರಿಂದ ರೂ. ೬೦೦೦/– | ನೋಂದಣಿ ಪೂರ್ವದಲ್ಲಿ ೧೨ ತಿಂಗಳುಗಳ ಅವಧಿಯಲ್ಲಿ ೯೦ ದಿನ ಕೆಲ ಮಾಡಿರಬೇಕು. ೧೮–೬೦ ವಯೋಮಿತಿಯೊಳಗೆ ಇರಬೇಕು. ನಮೂನೆ ೫ರಲ್ಲಿ ೧೧ ಕಾಲಂಗಳಲ್ಲಿ ವಿವಿದ ಸ್ಪಷ್ಟವಾಗಿ ಭರ್ತಿ ಮಾಡಬೇಕು. ನಮೂನೆ – ೬ರಲ್ಲಿ ನಾಮ ನಿರ್ದೇಶನದ ಅರ್ಜಿಯನ್ನು ತುಂಬಿ ಸಲ್ಲಿಸಬೇಕು. ಅರ್ಜಿ ನಮೂನೆ ೫ ರೊಂದಿಗೆ ವಯಸ್ಸಿನ ದೃಢೀಕರಣ ಪತ್ರ ಲಗತ್ತಿಸಬೇಕು (ಶಾಲಾ ದಾಖಲೆ/ ಜನನ ಪ್ರಮಾಣ ಪತ್ರ/ ವಾಹನ ಚಾಲನೆಯ ಪರಿವಾಣಗಿ. ಪಾಸ್ ಪೋರ್ಟ್, ಸರಕಾರಿ ಅಥವಾ ಎಂಬಿಬಿಎಸ್ ಪದವಿ ಹೊಂದಿದ ನೋಂದಾಯಿತ ವೈದ್ಯಾಧಿಕಾರಿ ಗಳಿಂದ ಪಡೆದಿರುವ ವಯಸ್ಸಿನ ದೃಢೀಕರಣ ಪತ್ರ (ಕಾಮಗಾರಿ ನಡೆಯುವ ಕಟ್ಟಡಾದ ಮಾಲಿಕರು . ಗುತ್ತಿಗೆದಾರರು ಅಥವಾ ಕಾರ್ಮಿಕ ಸಂಘಗಳ ಕಾಯ್ದೆ. ಅಡಿಯಲ್ಲಿ ನೋದಾಯಿತ ಯಾವುದೇ ಕಾರ್ಮಿಕ ಸಂಘಾ ಇವರಿಂದ ಪಡೆದಿರುವ ಉದ್ಯೋಗದ ದೃಢೀಕರಣ ಪತ್ರ) ಅರ್ಜಿ ನಮೂನೆ ೫ ರೊಂದಿಗೆ ಲಗತ್ತಿಸಬೇಕು ೩ ಭಾವ ಚಿತ್ರ ನೋಂದಣಿ |

| | | | | |
|---|---|---|---|---|
| | | | | ಶುಲ್ಕ ರೂ, ೨೫/- ರಾಷ್ಟ್ರೀಕೃತ ಬ್ಯಾಂಕ್ ನಲ್ಲಿ ಅರ್ಜಿದಾರನು ಖಾತೆ ತೆರೆಯಬೇಕು ಹಾಗೂ ಖಾತೆ ಸಂಖ್ಯೆಯನ್ನು ಅರ್ಜಿಯಲ್ಲಿ ನಮೂದಿಸಬೇಕು. |
| ೨. | **ಪ್ರಮುಖ ವೈದ್ಯಕೀಯ ಧನ ಸಹಾಯ** ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರ ಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರ ಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿಶಸ್ತ್ರ ಚಿಕಿತ್ಸೆ, ಇ.ಎನ್.ಟಿ ಚಿಕಿತ್ಸೆ ಮತ್ತು ಶಸ್ತ್ರ ಚಿಕಿತ್ಸೆ, ನರರೋಗಗ ಶಸ್ತ್ರ ಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರ ಚಿಕಿತ್ಸೆ, ಕರುಳಿನ ಶಸ್ತ್ರ ಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರ ಚಿಕಿತೆ, ಹರ್ನಿಯಶಸ್ತ್ರ ಚಿಕಿತ್ಸೆ, ಆಪೆಂಡಿಕ್ಸ್ ಶಸ್ತ್ರ ಚಿಕಿತ್ಸೆ, ಮೂಳೆ ಮುರಿತ / ಡಿಸ್‌ಲೊಕೇಶನ್ ಚಿಕಿತ್ಸೆ, ಸಾಮಾನ್ಯ ಶಸ್ತ್ರ ಚಿಕಿತ್ಸೆ. | ೧೮-೬೦ ವರ್ಷದೊಳಗಿನವರೆಗೆ ಎಲ್ಲಾ ಕಟ್ಟಡ ಕಾರ್ಮಿಕರಿಗೆ | ೨,೦೦,೦೦೦/- ವರೆಗೆ | ನೋಂದಣಿ ಪೂರ್ವದಲ್ಲಿ ೧೨ ತಿಂಗಳುಗಳ ಅವಧಿಯಲ್ಲಿ ೯೦ ದಿನ ಕಟ್ಟಡ ಕಾರ್ಮಿಕನಾಗಿ ಅರ್ಜಿದಾರನು ಕೆಲಸ ಮಾಡಿರಬೇಕು.<br>೧೮-೬೦ ವಯೋಮಿತಿಯೊಳಗೆ ಇರಬೇಕು.<br>ನಮೂನೆ ೫ ರಲ್ಲಿ ಅರ್ಜಿಯಲ್ಲಿ ತುಂಬಿಸಿ ಸಲ್ಲಿಸಬೇಕು.<br>೧೧ ಕಾಲಂಗಲಲ್ಲಿ ವಿವರ ಸ್ಪಷ್ಟವಾಗಿ ಭರ್ತಿ ಮಾಡಬೇಕು ನಮೂನೆ ೬ ರಲ್ಲಿ ನಾಮ ನಿರ್ದೇಶನ ಅರ್ಜಿಯನ್ನು ತುಂಬಿ ತುಂಬಿ ಸಲ್ಲಿಸಬೇಕು. ಅರ್ಜಿ ನಮೂನೆ ೫ ರೊಂದಿಗೆ ವಯಸ್ಸಿನ ದೃಢೀಕರಣ ಪತ್ರ ಲಗತ್ತಿಸಬೇಕು. (ಶಾಲಾದಾಖಲೆ / ಜನನ ಪ್ರಮಾಣ ಪತ್ರ / ವಾಹನ ಚಾಲನೆಯ ಪರವಾಣಗಿ / ಪಾಸ್ ಪೋರ್ಟ್, ಸರಕಾರಿ ಅಥವಾ ಎಂಬಿಬಿಎಸ್ ಪದವಿಹೊಂದಿದ ನೋಂದಾಯಿತ ವೈದ್ಯಧಿಕಾರಿಗಳಿಂದ ಪಡೆದಿರುವ ವಯಸ್ಸಿನ ದೃಢೀಕರಣ ಪತ್ರ. ಉದ್ಯೋಗದ ದೃಢೀಕರಣ ಪತ್ರ (ಕಾಮಗಾರಿ ನಡೆಯುವ ಕಟ್ಟಡದ |

| | | | | |
|---|---|---|---|---|
| | | | | ಮಾಲಿಕರು. ಗುತ್ತಿಗೆದಾರರು ಅಥವಾ ಕಾರ್ಮಿಕ ಸಂಘಗಳ ಕಾಯ್ದೆ ಅಡಿಯಲ್ಲಿ ನೋಂದಾಯಿತ **ಯಾವುದೇ ಕಾರ್ಮಿಕ ಸಂಘ** ಇವರಿಂದ ಪಡೆದಿರುವ ಉದ್ಯೋಗದ ದೃಢೀಕರಣ ಪತ್ರ) ಅರ್ಜಿ ನಮೂನೆ ೫ ರೊಂದಿಗೆ ಲಗತ್ತಿಸಬೇಕು ೩ ಭಾವ ಚಿತ್ರ ನೋಂದಣಿ ಶುಲ್ಕ ರೂ ೨೫/- |
| ೩. | ಅಂತ್ಯಕ್ರಿಯೆಗಾಗಿ ಮೃತನ ಕುಟುಂಬಕ್ಕಾಗಿ (ಸ್ವಾಭಾವಿಕ ಮರಣ) | ೧೮-೬೦ ವರ್ಷದೊಳಗಿನವರೆಗೆ ಎಲ್ಲಾ ಕಟ್ಟಡ ಕಾರ್ಮಿಕರಿಗೆ | ಅಂತ್ಯಕ್ರಿಯೆ ವೆಚ್ಚ ರೂ. ೪,೦೦೦/- ಹಾಗೂ ಎಕ್ಸ್‌ಗ್ರೇಷಿಯ ರೂ. ೫೦,೦೦೦/- ಧನಸಹಾಯ | ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಅರ್ಜಿದಾರನು ಖಾತೆ ಸಂಖ್ಯೆಯನ್ನು ಅರ್ಜಿಯಲ್ಲಿ ನಮೂದಿಸಬೇಕು ನಮೂನೆ ೫ರಲ್ಲಿ ಅರ್ಜಿಯನ್ನು ತುಂಬಿಸಿ ಸಲ್ಲಿಸಬೇಕು. |
| ೪. | **ಅಪಘಾತ ಪರಿಹಾರ**<br>ಫಲಾನುಭವಿ ಕೆಲಸ ಮಾಡುತ್ತಿದ್ದಾಗ ಮತ್ತು ಕೆಲಸದ ಸ್ಥಳದಿಂದ ಮನೆಗೆ ಹೋಗುವಾಗ ಅಥವಾ ಮನೆಯಿಂದ ಕೆಲಸಕ್ಕೆ ಹೋಗುವಮಾರ್ಗದ ಮಧ್ಯದಲ್ಲಿ ಅಪಘಾತ ಉಂಟಾಗಿ ತೀರಿಕೊಂಡಲ್ಲಿ ಆತನ ಅವಲಂಬಿತರಿಗೆ ಅಥವಾ ಫಲಾನುಭವಿ ಕೆಲಸ ಮಾಡುತ್ತಿದ್ದಾಗ ಅಪಘಾತಕ್ಕೀಡಾಗಿ ಸಂಪೂರ್ಣ ಶಾಶ್ವತ ಅಂಗವಿಕಲರಾದಲ್ಲಿ. | ಫಲಾನುಭವಿ ೧೮-೬೦ ವರ್ಷದೊಳಗಿನರಿರಬೇಕು ಆದಾಯ ವಯೋಮಿತಿ ಇಲ್ಲ. ಈ ನೆರವನ್ನು ಗಳಿಸಬಹುದಾದ ಫಲಾನುಭವಿ ಕಾರ್ಮಿಕ ಕಲ್ಯಾಣ ಮಂಡಳಿಯ ನಿಧಿಯಲ್ಲಿ ಹೆಸರನ್ನು ನಮೂದಿಸಬೇಕು. | ರೂ. ೨,೦೦,೦೦೦/- ರೂ.೫೦,೦೦೦/- ವನ್ನು ಮೃತರ ಅವಲಂಬಿರತಿಗೆ / ಊನಗೊಂಡ ಫಲಾನುಭವಿಗೆ, ಉಳಿದ ರೂ. ೧,೫೦,೦೦೦/- ಮೊತ್ತವನ್ನು ಅಂಚೆ ಕಛೇರಿಯ ಮಾಸಿಕ | ನೋಂದಣಿ ಪೂರ್ವದಲ್ಲಿ ೧೨ತಿಂಗಳುಗಳ ಅವಧಿಯಲ್ಲಿ ೯೦ ದಿನ ಕಟ್ಟಡ ಕಾರ್ಮಿಕನಾಗಿ ಅರ್ಜಿದಾರನು ಕೆಲಸ ಮಾಡಬೇಕು. ೧೮-೬೦ ವಯೋಮಿತಿಯೊಳಗೆ ಇರಬೇಕು ನಮೂನೆ ೫ರಲ್ಲಿ ಅರ್ಜಿ ಸಲ್ಲಿಸಬೇಕು. |

| | | | | |
|---|---|---|---|---|
| | (ಅಲ್ಲದೆ ಶಾಶ್ವತ ಭಾಗಶಃ ಅಂಗವಿಕಲರಾದಲ್ಲಿ ಒಟ್ಟು ರೂ.೨,೦೦,೦೦೦/- ಮೊತ್ತದ ಮೇಲೆ ಅಂಗವಿಕಲತೆಯ ಪ್ರಮಾಣದ ಶೇಕಡವಾರು ಆಧಾರದ ಮೇಲೆ ಪರಿಹಾರ) | | ವರಮಾನ ಯೋಜನೆಯಡಿಯಲ್ಲಿ ಹೂಡಿಕೆ ಮಾಡಲಾಗುವುದು. | |
| ೫. | ಮಾಹೆಯಾನ ಅಂಗವಿಕಲತೆ ಪಿಂಚಣಿ | ಕುಷ್ಠರೋಗ, ಕ್ಯಾನ್ಸರ್, ಪಾರ್ಶ್ವವಾಯು, ಟಿ.ಬಿ. ಕಾಯಿಲೆಗಳಿಂದ ಶಾಶ್ವತ ಅಂಗವಿಕಲತೆ ಹೊಂದಿದ ಫಲಾನುಭವಿಗಳಿಗೆ ೧೮-೬೦ ವರ್ಷ | ರೂ. ೫೦೦/- (ರೂ. ೫,೦೦೦/- ಎಕ್ಸ್‌ಗೇಷಿಯಾ ಧನಸಹಾಯ ಅಂಗವಿಕತೆಯ ಪ್ರಮಾಣವನ್ನು ಆಧರಿಸಿ) | ನೋಂದಣಿ ಪೂರ್ವದಲ್ಲಿ ೧೨ ತಿಂಗಳುಗಳ ಅವಧಿಯಲ್ಲಿ ೯೦ ದಿನ ಕಟ್ಟಡ ಕಾರ್ಮಿಕನಾಗಿ ಅರ್ಜಿದಾರನು ಕೆಲಸ ಮಾಡಬೇಕು. ೧೮-೬೦ ವಯೋಮಿತಿಯೊಳಗೆ ಇರಬೇಕು ನಮೂನೆ ೫ರಲ್ಲಿ ಅರ್ಜಿ ಸಲ್ಲಿಸಬೇಕು. |
| ೬. | ನೋಂದಾಯಿತರಲ್ಲದ ಕಟ್ಟಡ ಕಾರ್ಮಿಕರು ನಿರ್ಮಾಣ ಹಂತದಲ್ಲಿರುವ ಕಟ್ಟಡ ಕುಸಿತದಿಂದ ಅಪಘಾತ ಉಂಟಾಗಿ ಮೃತರಾದಲ್ಲಿ ಅವರ ಕುಟುಂಬಕ್ಕೆ ಮತ್ತು ಗಂಭೀರ ಗಾಯಗೊಂಡ ನೋಂದಾಯಿತರಲ್ಲದ ಕಟ್ಟಡ ಕಾರ್ಮಿಕರಿಗೆ | ೧೮-೬೦ ವರ್ಷ | ರೂ. ೫೦,೦೦೦/-<br>ರೂ. ೧೦,೦೦೦/- | ನಮೂನೆ ೫ರಲ್ಲಿ ಅರ್ಜಿ ಸಲ್ಲಿಸಬೇಕು |
| ಒಂದು ವರ್ಷ ಸದಸ್ಯತ್ವ ಪೂರ್ಣಗೊಂಡ ಫಲಾನುಭವಿಗೆ ದೊರಕುವ ಸೌಲಭ್ಯಗಳು | | | | |
| ೭. | ಹೆರಿಗೆ ಸೌಲಭ್ಯ ಮಹಿಳಾ ಫಲಾನುಭವಿಗೆ | ೧೮-೬೦ ವರ್ಷ | ರೂ. ೧೫,೦೦೦/- | ನೋಂದಣಿ ಪೂರ್ವದಲ್ಲಿ ೧೨ ತಿಂಗಳುಗಳ |

| | | | | |
|---|---|---|---|---|
| | ಎರಡು ಸಲ ಮಾತ್ರ | | | ಅವಧಿಯಲ್ಲಿ ೯೦ ದಿನ ಕಟ್ಟಡ ಕಾರ್ಮಿಕನಾಗಿ ಅರ್ಜಿದಾರನು ಕೆಲಸ ಮಾಡಬೇಕು. ೧೮-೬೦ ವಯೋಮಿತಿಯೊಳಗೆ ಇರಬೇಕು.<br>ನಮೂನೆ ೫ ರಲ್ಲಿ ಅರ್ಜಿ ಸಲ್ಲಿಸಬೇಕು. |
| ೮. | ಶೈಕ್ಷಣಿಕ ಧನಸಹಾಯ | ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಶೈಕ್ಷಣಿಕ ಧನಸಹಾಯ ೫, ೬ ಹಾಗೂ ೭ನೇ ತರಗತಿಯಲ್ಲಿ ಓದುತ್ತಿರುವವರಿಗೆ ಪ್ರತಿ ವರ್ಷಕ್ಕೆ.<br>೮ ಮತ್ತು ೯ನೇ ತರಗತಿ ಓದುತ್ತಿರುವವರಿಗೆ ಪ್ರತಿ ವರ್ಷಕ್ಕೆ<br>ಎಸ್.ಎಸ್.ಎಲ್.ಸಿ ಓದುತ್ತಿರುವವರಿಗೆ ಪ್ರತಿ ವರ್ಷಕ್ಕೆ.<br>ಪಿ,ಯು.ಸಿ ಪ್ರಥಮ ಮತ್ತು ದ್ವಿತೀಯ ಪರೀಕ್ಷೆ ಉತ್ತೀರ್ಣರಾದವರಿಗೆ ಪ್ರತಿ ವರ್ಷ. | <br>ರೂ. ೨,೦೦೦/-<br>ರೂ. ೩,೦೦೦/-<br>ರೂ. ೫,೦೦೦/- | ನೋಂದಣಿ ಪೂರ್ವದಲ್ಲಿ ೧೨ ತಿಂಗಳುಗಳ ಅವಧಿಯಲ್ಲಿ ೯೦ ದಿನ ಕಟ್ಟಡ ಕಾರ್ಮಿಕನಾಗಿ ಅರ್ಜಿದಾರನು ಕೆಲಸ ಮಾಡಬೇಕು. ೧೮-೬೦ ವಯೋಮಿತಿಯೊಳಗೆ ಇರಬೇಕು.<br>ನಮೂನೆ ೫ ರಲ್ಲಿ ಅರ್ಜಿ ಸಲ್ಲಿಸಬೇಕು. |

| | | | | |
|---|---|---|---|---|
| | | ಐಟಿಐ ಓದುತ್ತಿರುವರಿಗೆ ಪ್ರತಿ ವರ್ಷ. | ರೂ. ೫,೦೦೦/- | |
| | | ಪದವಿ ಓದುತ್ತಿರುವವರಿಗೆ ಪ್ರತಿ ವರ್ಷ. | ರೂ. ೫,೦೦೦/- | |
| | | ಸ್ನಾತಕೋತರ ಪದವಿ ಓದುತ್ತಿರುವವರಿಗೆ ಪ್ರತಿ ವರ್ಷಕ್ಕೆ. | ರೂ. ೫,೦೦೦/- | |
| | | ವೈದ್ಯಕೀಯ / ಇಂಜಿನಿಯರಿಂಗ್ ಪದವಿ ಓದುತ್ತಿರುವವರಿಗೆ ಸರ್ಕಾರವು ಅರ್ಹತೆಯ ಸ್ಥಾನಕ್ಕೆ ನಿಗಧಿ ಪಡಿಸಿದ ಶುಲ್ಕ ಪಾವತಿ ಮತ್ತು ಪ್ರತಿ ತಿಂಗಳಿಗೆ | ರೂ. ೧೫,೦೦೦/-<br>ರೂ. ೧,೦೦೦/- ಗಳ ಹಾಜರಾತಿ ಭತ್ಯೆ | |

| | | | | |
|---|---|---|---|---|
| ೯. | ಮದುವೆಗೆ ಧನ ಸಹಾಯ | ಮದುವೆಗೆ ಧನಸಹಾಯ ಫಲಾನುಭವಿಗೆ ಅಥವಾ ಅವರ ಇಬ್ಬರ ಮಕ್ಕಳಿಗೆ | ೫೦,೦೦೦/- | ಮ್ಯಾರೇಜ್ ರಿಜಿಸ್ಟ್ರೇಷನ್ ಪ್ರತಿ ಮದುವೆ ಕಾರ್ಮಿಕ ಮದುವೆಯ ಭಾವಚಿತ್ರ. |
| ಎರಡು ವರ್ಷ ಸದಸ್ಯತ್ವ ಪೂರ್ಣಗೊಂಡ ಫಲಾನುಭವಿಗೆ ದೊರಕುವ ಸೌಲಭ್ಯಗಳು | | | | |
| ೧೦. | ಉಪಕರಣಗಳ ಖರೀದಿಗೆ ಧನಸಹಾಯ | | ರೂ. ೫,೦೦೦/- | |

# ಕರ್ನಾಟಕ ಕಟ್ಟಡ ಮತ್ತು ಇತರ ನಿರ್ಮಾಣ ಕಾರ್ಮಿಕರ ಕಲ್ಯಾಣ ಯೋಜನೆ

ಕಟ್ಟಡ ಮತ್ತು ಇತರ ನಿರ್ಮಾಣ ಕಾರ್ಮಿಕರು ಅಸಂಘಟಿತ ವಲಯಕ್ಕೆ ಸೇರಿದ್ದು ಅನೇಕ ಸಾಮಾಜಿಕ ಸುರಕ್ಷತೆಯ ಸೌಲಭ್ಯಗಳಿಂದ ವಂಚಿತರಾಗಿರುತ್ತಾರೆ. ಈ ಕೊರತೆಯನ್ನು ದೂರ ಮಾಡುವ ಉದ್ದೇಶದಿಂದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗಾಗಿ ಕಲ್ಯಾಣ ಮಂಡಳಿಯನ್ನು ಜನವರಿ ೨೦೦೭ರಲ್ಲಿ ರಚನೆ ಮಾಡಲಾಗಿದೆ. ಮಂಡಳಿಯ ವತಿಯಿಂದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರನ್ನು ಫಲಾನುಭವಿಗಳೆಂದು ನೋಂದಾಯಿಸಿ ಸೌಲಭ್ಯಗಳ ದರಗಳನ್ನು ಪರಿಷ್ಕರಿಸಲಾಗಿದೆ. ಶ್ರಮಿಕ ವಲಯದ ಶೋಷಿತ ವರ್ಗಕ್ಕೆ ಸೇರಿದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಈ ಸೌಲಭ್ಯಗಳನ್ನು ತಲುಪಿಸುವ ಅಗತ್ಯ ಇರುತ್ತದೆ.

## ಕಾಯ್ದೆ ಮತ್ತು ನಿಯಮಗಳ ಸ್ಥೂಲ ಪರಿಚಯ:

ಹಿಂದಿನ ಹನ್ನೆರಡು ತಿಂಗಳ ಅವಧಿಯಲ್ಲಿ ಹತ್ತು ಅಥವ ಅದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಕಟ್ಟಡ ಮತ್ತು ಇತರ ನಿರ್ಮಾಣ ಕಾರ್ಯದಲ್ಲಿ ಕಟ್ಟಡ ಕಾರ್ಮಿಕರನ್ನು ಕೆಲಸಕ್ಕೆ ನೇಮಿಸಿಕೊಂಡಂತಹ ಸಂಸ್ಥೆಗೆ ಈ ಕಾಯ್ದೆ ಅನ್ವಯಿಸುತ್ತದೆ.

ಕಟ್ಟಡ ಮತ್ತು ಇತರ ನಿರ್ಮಾಣದ ಕೆಲಸ ಎಂದರೆ ಕಟ್ಟಡಗಳು, ರಸ್ತೆಗಳು, ಬೀದಿಗಳು, ರೈಲುಗಳು, ವಿಮನ ನಿಲ್ದಾಣಗಳು, ನೀರಾವರಿ, ಒಳ ಚರಂಡಿ, ಎಂಬಾರ್ಕ್‌ಮೆಂಟ್ ಮತ್ತು ನೆವೇಗೇಷನ್ ಕಾಮಾಗಾರಿಗಳು, ಪ್ರವಾಯ ನಿಯಂತ್ರಣದ ಕಾಮಗಾರಿಗಳು ವಿದ್ಯುತ್ ಉತ್ಪಾದನೆ, ಪ್ರಸರಣ ಮತ್ತು ವಿತರಣೆ, ನೀರಿನ ಕಾಲುವೆ ಕಾಮಗಾರಿಗಳು, ತೈಲ ಮತ್ತು ಅನಿಲ ಸ್ಥಾವರಗಳು, ವಿದ್ಯುತ್ ತಂತಿಗಳು, ವಯರ್‌ಲೆಸ್, ಆಕಾಶವಾಣಿ, ದೂರದರ್ಶನ, ದೂರವಾಣಿ, ತಂತಿ ಮತ್ತು ಸಾಗರೋತ್ತರ ಸಂಪರ್ಕ, ಅಣೆಕಟ್ಟುಗಳು, ಕಾಲುವೆಗಳು, ಜಲಶಯಗಳು, ವಾಟರ್‌ಕೋರ್ಸ್‌ಸ್, ಟನ್ನೆಲ್ಸ್, ಸೇರುವೆಗಳು, ವಯಾಡಕ್ಟ್ಸ್, ಆಕ್ವಾಡಕ್ಟ್, ಕೊಳವೆ ಮಾರ್ಗಗಳು, ಟವರ್ಸ್, ಕೂಲಿಂಗ್ ಟವರ್ಸ್ ಟ್ರಾನ್ಸಿಮಿಶನ್ ಟವರ್ಸ್ ಇವುಗಳಿಗೆ ಸಂಬಂಧಿಸಿದ ನಿರ್ಮಾಣದ ಕೆಲಸ, ಆಲ್ಟರೇಶನ್, ದುರಸ್ಥಿ, ನಿರ್ವಹಣೆ ಅಥವಾ ನೆಲಸಮಗೊಳಿಸುವ ಕಾಮಗಾರಿಗಳು ಇದರಲ್ಲಿ ಒಳಗೊಂಡಿರುತ್ತವೆ. ಆದರೆ ಕಾರ್ಖಾನೆಗಳ ಕಾಯ್ದೆ, ೧೯೪೮ ಅಥವಾ ಗಣಿಗಳ ಕಾಯ್ದೆ, ೧೯೫೨ ಇವುಗಳ ಅಡಿಯಲ್ಲಿ ಅನ್ವಯಿಸುವ ಕಟ್ಟಡ ಮತ್ತು ಇತರೆ ನಿರ್ಮಾಣದ ಕೆಲಸಗಳು ಈ ಕಾಯ್ದೆಯ ಪರಿಮಿತಿಯಲ್ಲಿ ಬರುವುದಿಲ್ಲ.

ಹಾಗೆಯೇ ಕಟ್ಟಡ ಕಾರ್ಮಿಕ ಎಂದರೆ ಕಟ್ಟಡ ಮತ್ತು ಇತರ ನಿರ್ಮಾಣದ ಕೆಲಸದಲ್ಲಿ ನೇಮಿಸಲಾದ ಕುಶಲ, ಅರೆಕುಶಲ ಮ್ಯಾನುಯಲ್, ಸುಪರವೈಜರಿ, ತಾಂತ್ರಿಕ ಅಥವಾ ಲಿಪಿಕ ವ್ಯಕ್ತಿಗಳು ವ್ಯವಸ್ಥಾಪಕ ಅಥವಾ ಆಡಳಿತ ಹುದ್ದೆಯಲ್ಲಿ ಇರುವವರು ಅಥವಾ ಮಾಹೆಯಾನ ೧೬೦೦೦ರೂ. ಗಿಂತ ಹೆಚ್ಚಿಗೆ ಸಂಬಳ ಪಡೆಯುವ ಸುಪರವೈಜರಿ ಹುದ್ದೆಯಲ್ಲಿ ನೇಮಕಗೊಂಡಿರುವ ವ್ಯಕ್ತಿಗಳಿಗೆ ಈ ಕಾಯ್ದೆ ಅನ್ವಯಿಸುವುದಿಲ್ಲ.

**ಈ ಕೆಳಗಿನ ವೃತ್ತಿಯವರು ಕಟ್ಟಡ ಕಾರ್ಮಿಕ ಕಲ್ಯಾಣ ಯೋಜನೆಯ ಫಲ ಪಡೆಯಬಹುದು.**

ರೋಡ್ ರೋಲರ್ ಡ್ರೈವರ್, ಸ್ಟೋನ್ ಕಟ್ಟಿಂಗ್ಸ್, ಮೇಸನ್ ಅಥವಾ ಬ್ರಿಕ್ ಲೇಯರ್ ಕ್ಲಾಸ್ – ೧ (ಮೇಸ್ತ್ರಿ/ಗಾರೆ ಕೆಲಸ), ಕಾರ್ಪೆಂಟರ್ ಕ್ಲಾಸ್ – ೧, ಪ್ಲಂಬರ್, ಓನ್ ಸ್ಮಿತ್, ಫೋರ್ಮನ್, ಪೈಂಟರ್, ಫಿಟ್ಟರ್ ಕ್ಲಾಸ್ – ೧, ಬ್ಲಾಕ್ ಸ್ಮಿತ್, ಮೆಕ್ಯಾನಿಕ ಕ್ಲಾಸ್ – ೧, ನ್ಯೂಮ್ಯಾಟಿಕ್ ಡ್ರಿಲ್ಲರ್ , ವೆಲ್ಡರ್ , ಎಲೆಕ್ಟ್ರಿಷಿಯನ್, ಮೇಸ್ತ್ರಿ ಅಥವಾ ಸೂಪರ್ ವೈಸರ್ / ಕ್ಲಾರ್ಕ್ ಗ್ರೇಡ್ – ೧, ಬಾರ್ ಬೆಂಡರ್, ಫ್ಲೋರ್ ಪಾಲಿಷರ್, ವೈಟ್ ವಾಷರ್, ಹೆಲ್ಪರ್ ಟು ಕಾರ್ಪೆಂಟರ್

**ಕಟ್ಟಡ ಮತ್ತು ಇತರ ನಿರ್ಮಾಣ ಕಾರ್ಮಿಕರಿಗೆ ಆರೋಗ್ಯ ಇಲಾಖೆಯಿಂದ ಕೇಂದ್ರ ಮತ್ತು ರಾಜ್ಯ ಸರಕಾರದ ವಿವಿಧ ಸಹಾಯಧನಗಳು**

೧. ಒಳರೋಗಿಯಾಗಿ ಧನ ಸಹಾಯ
೨. ವೈದ್ಯಕೀಯ ನೆರವು
೩. ಮೃತನ ಕುಟುಂಬಕ್ಕೆ ಅಂತ್ಯಕ್ರಿಯೆಗಾಗಿ ಆರ್ಥಿಕ ನೆರವು.
೪. ಅಪಘಾತ ಪರಿಹಾರ.
೫. ಮಾಹೆಯಾನ ವಿಕಲಾಂಗ ಪಿಂಚಣಿ.
೬. ನೋಂದಾಯಿತರಲ್ಲದ ಕಟ್ಟಡ ಕಾರ್ಮಿಕರು ನಿರ್ಮಾಣ ಹಂತದಲ್ಲಿರುವ ಕಟ್ಟಡ ಕುಸಿತದ ಅಪಘಾತ ಉಂಟಾಗಿ ಮೃತರಾದಲಿ ಅವ್ರ ಕುಟುಂಬಕ್ಕೆ ಮತ್ತು ಗಂಭೀರ ಗಾಯಗೊಂಡ ನೋಂದಾಯಿತರಲ್ಲದ ಕಟ್ಟಡ ಕಾರ್ಮಿಕರಿಗೆ ಪರಿಹಾರ ಧನ.
೭. ಮಹಿಳಾ ಫಲಾನುಭವಿಗೆ ಹೆರಿಗೆ ಸೌಲಭ್ಯ.
೮. ಕಟ್ಟಡ ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಧನಸಹಾಯ.
೯. ಮದುವೆಗೆ ಧನಸಹಾಯ.
೧೦. ಉಪಕರಣಗಳ ಖರೀದಿಗೆ ಧನಸಹಾಯ.
೧೧. ಮಹಿಳಾ ಹಾಗೂ ಪುರುಷ ಕಾರ್ಮಿಕರಿಗೆ ಮಾಹೆಯಾನ ಪಿಂಚಣಿ.
೧೨. ಫಲಾನುಭವಿಗೆ ಮನೆಕಟ್ಟುವುದಕ್ಕೆ / ಖರೀದಿಸುವುದಕ್ಕೆ ಸಾಲ ಸೌಲಭ್ಯ.

**ಕಟ್ಟಡ ಮತ್ತು ಇತರ ನಿರ್ಮಾಣ ಕಾರ್ಮಿಕರ ಫಲಾನುಭವಿ ಎಂದು ನೋಂದಣಿಯಾಗಲು ಅರ್ಹತೆಗಳು ಚೆಕ್‌ಲಿಸ್ಟ್ (ಅರ್ಹತಾ ಪಟ್ಟಿ)**

೧. ನೋಂದಾಣಿ ಪೂರ್ವದಲ್ಲಿ ೧೨ತಿಂಗಳಳ ಅವಧಿಯಲ್ಲಿ ೯೦ ದಿನ ಕಟ್ಟಡ ಕಾರ್ಮಿಕರಾಗಿ ಕೆಲಸ ಮಾಡಿರಬೇಕು.

೨. ೧೮–೬೦ ವಯೋಮಿತಿಯೊಳಗೆ ಇರಬೇಕು.

೩. ನಮೂನೆ ೫ ರ ಅರ್ಜಿಯನ್ನು ಲಗತ್ತಿಸಬೇಕು.

 ಚೆ. ಎ) ಅದರ ಎಲ್ಲಾ ೧೧ ಕಾಲಂಗಳಲ್ಲಿ ವಿವರ ಭರ್ತಿ ಮಾಡಿರಬೇಕು.

 ಛ. ನಮೂನೆ –೬ ನಾಮ ನಿರ್ದೇಶನದ ಅರ್ಜಿಯನ್ನು ಲಗತ್ತಿಸಬೇಕು.

೪. ಅದರ ಸಂಬಂಧಪಟ್ಟ ಎಲ್ಲಾ ಕಾಲಂಗಳನ್ನು ಭರ್ತಿ ಮಾಡಿರಬೇಕು.

೫. ವಯಸ್ಸಿನ ದೃಢೀಕರಾಣ ಪತ್ರ ಲಗತ್ತಿಸಬೇಕು.

೬. ಉದ್ಯೋಗದ ದೃಢೀಕರಣ ಪತ್ರ ಲಗತ್ತಿಸಬೇಕು.

೭. ಪಾಸ್‌ಪೋರ್ಟ್ ಅಳತೆಯ ಪೋಟೋಗಳನ್ನು ಒದಗಿಸಬೇಕು.

೮. ನೋಂದಣಿ ಶುಲ್ಕ ರೂ. ೨೫/– ಪಾವತಿಸಬೇಕು. ಪ್ರತಿ ತಿಂಗಳು ರೂ. ೧೦/– ರಂತೆ ವಂತಿಗೆ ಹಣವನ್ನು ಪಾವತಿಸಬೇಕು.

**ಕಟ್ಟಡ ಮತ್ತು ಇತರ ನಿರ್ಮಾಣ ಕಾರ್ಮಿಕರು ಫಲಾನುಭವಿ ಎಂದು ನೋಂದಣಿಯಾದವರಿಗೆ ವೈದ್ಯಕೀಯ ಸೌಲಭ್ಯಗಳು ದೊರಕುವ ಮಂಗಳೂರಿನಲ್ಲಿರುವ ಕೆಲವೊಂದು ಆಸ್ಪತ್ರೆಗಳ ಹೆಸರು.**

೧. ಕೆ.ಎಸ್. ಹೆಗಡೆ ಮೆಡಿಕಲ್ ಕಾಲೇಜ್ ಆಸ್ಪತ್ರೆ, ದೇರಳಕಟ್ಟೆ ಮಂಗಳೂರು.

೨. ಫಾದರ್ ಮುಲ್ಲರ್ ಮೆಡಿಕಲ್ ಕಾಲೇಜ್ ಆಸ್ಪತ್ರ, ಕಂಕನಾಡಿ, ಮಂಗಳೂರು.

೩. ಎ.ಜೆ ಆಸ್ಪತ್ರೆ ಮತ್ತು ರಿಸರ್ಚ್ ಸೆಂಟರ್, ಕುಂಟಿಕಾನ ಮಂಗಳೂರು.

೪. ಓಮೆಗಾ ಆಸ್ಪತ್ರೆ (ಪಿ) ಲಿಮಿಟೆಡ್, ಪಂಪ್‌ವೆಲ್, ಮಂಗಳೂರು.

೫. ಸಿಟಿ ಆಸ್ಪತ್ರೆ ರಿಸರ್ಚ್ ಮತ್ತು ಡಯಗ್ನಾಸ್ಟಿಕ್ ಸೆಂಟರ್, ಕದ್ರಿ ಮಂಗಳೂರು.

೬. ಪ್ರಗತಿ ಸ್ಪೆಷಾಲಿಟಿ ಆಸ್ಪತ್ರೆ, ಮೈನ್ ರೋಡ್, ಬೊಲುವಾರು, ಪುತ್ತೂರು – ೫೭೪೨೦೧. ದಕ್ಷಿಣ ಕನ್ನಡ ಜಿಲ್ಲೆ.

೭. ಮಂಗಳೂರು ನರ್ಸಿಂಗ್ ಹೋಂ ಮತ್ತು ಮಂಗಳೂರು ಕಿಡ್ನಿ ಪೌಂಡೇಷನ್, ಬಲ್ಮಠ, ಮಂಗಳೂರು.

**ಸುಂಕ ಕಾಯ್ದೆ, ೧೯೯೬ ಮತ್ತು ನಿಯಮಗಳು ೧೯೯೮**

ಕಟ್ಟಡ ಮತ್ತು ಇತರ ನಿರ್ಮಾಣ ವೆಚ್ಚದ ಶೇಕಡಾ ಒಂದರಷ್ಟು ಹಣವನ್ನು ಸುಂಕ ಎಂದು ನಿರ್ಮಾಣ ಕಾಮಗಾರಿಯ ನಿಯೋಜಕರು / ಗುತ್ತಿಗೆದಾರರು ಕಟ್ಟಡ ಮತ್ತು ಇತರ ನಿರ್ಮಾಣ ಕಾರ್ಮಿಕರ ಪರಿಹಾರ ಸೇರುವುದಿಲ್ಲ. ನಿರ್ಮಾಣದ ಕಾಮಗಾರಿಯ ಕೆಲಸ ಮುಕ್ತಯವಾದ ಮೂವತ್ತು ದಿನಗಳ ಒಳಗಾಗಿ ಅಥವಾ ಸುಂಕ ನಿರ್ಧಾರದ ದಿನಾಂಕದಿಂದ ಮೂವತ್ತು ದಿನಗಳ ಒಳಗಾಗಿ ಇವೆರಡರಲ್ಲಿ ಯಾವುದು ಮೊದಲು ಬರುತ್ತದೆಯೋ ಆ ಕಾಮಾಗಾರಿಯ ಸುಂಕವನ್ನು ನಿಯೋಜಕರು, ಸುಂಕ ಸಂಗ್ರಹಧಿಕಾರಿ ಅವರಿಗೆ ಪಾವತಿ ಮಾಡಬೇಕಾಗುತದೆ.

ಅಸಂಘಟಿತ ವಲಯದಲ್ಲಿರುವ ಮಾಹಿತಿದಾರರಿಗೆ ಸರಕಾರದಿಂದ ಸಿಗುವಂತಹ ಸೌಲಭ್ಯಗಳು ಇದ್ದರು ಅದರ ಉಪಯೋಗವನ್ನು ಅವರು ಪಡೆದುಕೊಂಡಿರುವುದಿಲ್ಲ,ಆದರೆ ಕೆಲವರಿಗೆ ಅರಿವೇ ಇಲ್ಲದೆ ಈ ಸೌಲಭ್ಯಗಳು ಸಮರ್ಪಕವಾಗಿ ಬಳಕೆಯಾಗುತ್ತಿಲ್ಲ. ಈ ವರ್ಗದವರು ತಮಗೆ ಅನ್ವಯವಾಗುವ ಸೌಲಭ್ಯಗಳನ್ನು ಪಡೆಯಲು ಪ್ರಯತ್ನಿಸಬೇಕು.

ಈ ಅಧ್ಯಾಯದಲ್ಲಿ ಕಟ್ಟಡ ಕಾರ್ಮಿಕರಿಗೆ ಸರಕಾರದಿಂದ ಸಿಗುವ ಸೌಲಭ್ಯಗಳನ್ನು ಸ್ಥೂಲವಾಗಿ ವಿವರಿಸಲಾಗಿದ್ದು. ಮುಂದಿನ ಅಧ್ಯಾಯದಲ್ಲಿ ಈ ಸೌಲಭ್ಯಗಳನ್ನು ತಮ್ಮ ಆರ್ಥಿಕ ಮತ್ತು ಸಾಮಾಜಿಕ ಸುಧಾರಣೆಗಾಗಿ ಬಳಸಿಕೊಂಡಿದ್ದಾರೆ ಎಂಬುದರ ಬಗ್ಗೆ ವಿಶ್ಲೇಷಿಸಲಾಗುವುದು.

# ಅಧ್ಯಾಯ ೪ ಅಸಂಘಟಿತ ಕಟ್ಟಡ ಕಾರ್ಮಿಕರ ಸೇವೆಯನ್ನು ಪರಿಗಣಿಸುವ ವಿಧಾನಗಳು

ಅಸಂಘಟಿತ ವಲಯದಲ್ಲಿ ದುಡಿಯುವ ಕಟ್ಟಡ ಕಾರ್ಮಿಕರಿಗಾಗಿ ಈಗಾಗಲೇ ಕೈಗೊಂಡಿರುವ ಕ್ರಮಗಳ ಬಗ್ಗೆ ತಿಳಿದರೆ ಸಾಲದು, ಆ ಕ್ರಮಗಳ ಬಗ್ಗೆ ಅಲ್ಲಿ ದುಡಿಯುವ ಕಟ್ಟಡ ಕಾರ್ಮಿಕರ ಅಭಿಪ್ರಾಯಗಳನ್ನು ತಿಳಿಯಲು ಅವರಿಂದಲೇ ವಿಷಯಗಳನ್ನು ಪ್ರಶ್ನಾವಳಿಯ ಮೂಲಕ ಮಾಡಿರುವುದರ ವಿವರಣೆಯನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಪ್ರತಿಯೊಬ್ಬ ಮನುಷ್ಯ ತಮ್ಮ ಹೊಟ್ಟೆ ಪಾಡಿಗಾಗಿ ಹಲವು ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾನೆ. ಅದರಲ್ಲಿ ಕಟ್ಟಡ ಕಾರ್ಮಿಕರೂ ಒಂದು. ಇಲ್ಲಿ ಯಾವುದೇ ಸಂಘಟಿತ ಸೌಕರ್ಯಗಳು ಲಭ್ಯವಿಲ್ಲ.ಇಲ್ಲಿ ದುಡಿಯುವವರು ಹೆಚ್ಚಾಗಿ ಬಡವರಾಗಿರುತ್ತಾರೆ.

ಆಧುನಿಕ ತಂತ್ರಜ್ಞಾನದಿಂದ ಪ್ರತಿಯೊಂದು ಕ್ಷೇತ್ರವು ಅಭಿವೃದ್ಧಿ ಪಥದಲ್ಲಿ ಸಾಗುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಆದರೆ ಅದರಲ್ಲಿ ಅಸಂಘಟಿತ ಕಟ್ಟಡ ಕಾರ್ಮಿಕರೂ ಒಂದು.ದೇಶದ ಅಭಿವೃದ್ಧಿಯಲ್ಲಿ ಅಸಂಘಟಿತ ವಲಯದ ಪಾತ್ರ ಬಹು ಮುಖ್ಯವಾದದ್ದು ಯಾಕೆಂದರೆ ಶೇಕಡಾ ೫೬.೭ ರಷ್ಟು ಆದಾಯ ಅಸಂಘಟಿತ ವಲಯದಿಂದ ಬಂದರೆ,ಶೇಕಡಾ ೪೩.೩ ರಷ್ಟು ಆದಾಯ ಸಂಘಟಿತ ವಲಯದಿಂದ ಬರುತ್ತಿದೆ.ಅಸಂಘಟಿತ ವಲಯದ ಕೊಡುಗೆ ಅಧಿಕವಾಗಿರುವುದರಿಂದ ಅದರಲ್ಲಿ ಒಂದಾದ ಕಟ್ಟಡ ಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಗಳನ್ನು ತಿಳಿಯಬೇಕೆಂಬ ಒಂದು ಕುತೂಹಲವಿರುವುದರಿಂದ ಈ ಮೂಲಕ ಇದರ ಸಂಶೋಧನೆಯನ್ನು ಮಾಡಲಾಗಿದೆ.

ಕಟ್ಟಡ ಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ ಪೆರ್ನೆ ಗ್ರಾಮುದಲ್ಲಿ ಒಂದು ಅಧ್ಯಯನ ಎಂಬ ಅಧ್ಯಯನವು ಅಸಂಘಟಿತ ವಲಯದ ಕಟ್ಟಡ ಕಾರ್ಮಿಕರ ಸಮಸ್ಯೆಗಳನ್ನು ಅಧ್ಯಯನ ಮಾಡುವುದನ್ನು ಉದ್ದೇಶವಾಗಿಟ್ಟುಕೊಂಡು ನಡೆಸಲಾಗಿದೆ. ಈ ಸಮೀಕ್ಷೆಯು ಪುರುಷ ಕಾರ್ಮಿಕರ ವೃತ್ತಿ, ಪ್ರವೃತ್ತಿ, ತೃಪ್ತಿಯ ಕುರಿತಾಗಿ ಮಾತ್ರವಲ್ಲದೆ ಅವರ ಭಾಗವಹಿಸುವಿಕೆಯ ಕುರಿತು ಕೇಂದ್ರೀಕೃತಗೊಂಡಿದೆ.

ಪೆರ್ನೆ ಗ್ರಾಮದ ಅಸಂಘಟಿತ ಕಟ್ಟಡ ಕಾರ್ಮಿಕರಿಂದ ಪ್ರಶ್ನಾವಳಿ ವಿಧಾನದ ಮೂಲಕ ಪ್ರಾಥಮಿಕ ಮಾಹಿತಿಯನ್ನು ಪುರುಷ ಕಾರ್ಮಿಕರಿಂದ ಸಂಗ್ರಹಿಸಲಾಯಿತು. ಹೀಗೆ ಸಂಗ್ರಹಿಸಿದ ಮಾಹಿತಿಯನ್ನು ಈ ಕೆಳಗಿನ ಶೀರ್ಷಿಕೆಗಳಡಿಯಲ್ಲಿ ಕೋಷ್ಟಕಗಳ ಮೂಲಕ ಅಭಿವ್ಯಕ್ತಪಡಿಸಲಾಗಿದೆ.

ಪ್ರಶ್ನಾವಳಿಗೆ ಉತ್ತರಿಸಿದವರಲ್ಲಿ ಈ ಕೆಳಕಂಡ ವಯೋಮಾನ ಗುಂಪುಗಳಿಗೆ ಸೇರಿದವರಾಗಿದ್ದಾರೆ.

ಅಸಂಘಟಿತ ಕಾರ್ಮಿಕರು ವಿವಿಧ ಮಯೋಮಾನದವರು ಇರುತ್ತಾರೆ. ಇವರ ವಯೋಮಾನವು ಕೆಲಸದ ಬಗ್ಗೆ ಇರುವ ಅನುಭವವನ್ನು ತಿಳಿಸುತ್ತದೆ.ಇದರ ಮಾಹಿತಿಯನ್ನು ಕೋಷ್ಟಕ ೪.೧ರಲ್ಲಿ ನೀಡಲಾಗಿದೆ.

| ಕ್ರ.ಸಂ | ವಯಸ್ಸು | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ೧೪-೧೮ | ೦೨ | ೦೪ |
| ೨ | ೧೯-೨೦ | ೦೨ | ೦೪ |
| ೩ | ೨೦-೩೦ | ೨೦ | ೪೦ |
| ೪ | ೩೦-೪೦ | ೧೮ | ೩೬ |
| ೫ | ೪೦ ಮತ್ತು ಮೇಲ್ಪಟ್ಟು | ೦೮ | ೧೬ |
| | | ೫೦ | ೧೦೦ |




ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ ಶೇಕಡಾ ೪ ರಷ್ಟು ಮಾಹಿತಿದಾರರು ೧೪-೧೮ ವರ್ಷಕ್ಕೆ ಸೇರಿದ್ಧಾರೆ,ಶೇಕಡಾ ೪ ರಷ್ಟು ಮಾಹಿತಿದಾರರು ೧೯-೨೦ ವಯೋಮಾನಕ್ಕೆ ಸೇರಿದ್ದಾರೆ, ಶೇಕಡಾ ೪೦ ರಷ್ಟು ಮಾಹಿತಿದಾರರು ೨೦-೩೦ ವಯೋಮಾನ ದ ವರ್ಗಕ್ಕೆ ಸೇರಿದ್ದಾರೆ, ಶೇಕಡಾ ೩೬ ರಷ್ಟು ಮಾಹಿತುದಾರರು ೩೦-೪೦ ವಯೋಮಾನಕ್ಕೆ ಸೇರಿದ್ದಾರೆ ಹಾಗೂ ಶೇಕಡಾ ೧೬ ರಷ್ಟು ಮಾಹಿತಿದಾರರು ೪೦ ವರ್ಷದಿಂದ ಮೇಲ್ಪಟ್ಟವರಾಗಿದ್ದಾರೆ. ಇದರಿಂದ ತಿಳಿಯುವುದೇನೆಂದರೆ ಅಸಂಘಟಿತ ಕಟ್ಟಡ ಕಾರ್ಮಿಕರಲ್ಲಿ ಹೆಚ್ಚಾಗಿ ೨೦-೩೦ ವಯೋಮಾನದವರು ಕಂಡುಬರುತ್ತಾರೆ.ಅಂದರೆ ಈ ವಯೋಮಾನದಲ್ಲಿ ವಿಧ್ಯಾಭ್ಯಾಸವನ್ನು ಮುಂದುವರಿಸಲು ಸಾಧ್ಯವಾಗದ ಪುರುಷ ಕಾರ್ಮಿಕರು ವೃತ್ತಿಯನ್ನು ತಮ್ಮ ಜೀವನ ಶೈಲಿಯನ್ನು ರೂಪಿಸಲು ಆರಿಸಿಕೊಂಡಿರುವುದನ್ನು ಕಾಣಬಹುದು.

ಬದಲಾವಣೆಯ ಪ್ರಮುಖ ಅಸ್ತ್ರ ಶಿಕ್ಷಣ. ಶಿಕ್ಷಣವು ಕಾರ್ಮಿಕರನ್ನು ಸಬಲೀಕರಣದ ಹಾದಿಗೆ ಕೊಂಡೊಯ್ಯಬಲ್ಲದು.

ಅಸಂಘಟಿತ ಕಾರ್ಮಿಕರ ವಿದ್ಯಾರ್ಹತೆಯನ್ನು ಕೋಷ್ಟಕ ೪.೨ ರಲ್ಲಿ ಅಭಿವ್ಯಕ್ತಗೊಳಿಸಲಾಗಿದೆ.

| ಕ್ರ.ಸಂ | ವಿಧ್ಯಾರ್ಹತೆ | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಪ್ರಾಥಮಿಕ | ೩೨ | ೬೪ |
| ೨ | ಪ್ರೌಢ | ೧೪ | ೨೮ |
| ೩ | ಪದವಿಪೂರ್ವ | ೦೪ | ೦೮ |
| ೪ | ಪದವಿ | ೦೦ | ೦೦ |
| | | ೫೦ | ೧೦೦ |




ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ ಶೇಕಡಾ ೬೪ ರಷ್ಟು ಕಾರ್ಮಿಕರು ಪ್ರಾಥಮಿಕ ಶಿಕ್ಷಣವನ್ನೂ, ೨೮ ರಷ್ಟು ಕಾರ್ಮಿಕರು ಪ್ರೌಢ ಶಿಕ್ಷಣವನ್ನೂ, ಶೇಕಡಾ ೮ ರಷ್ಟು ಕಾರ್ಮಿಕರು ಪದವಿಪೂರ್ವ ಶಿಕ್ಷಣವನ್ನೂ ಹಾಗೂ ಪದವಿ ಶಿಕ್ಷಣವನ್ನು ಪಡೆದವರು ಒಬ್ಬರೂ ಇಲ್ಲ.ಇದರಿಂದ ತಿಳಿಯುವುದೇನೆಂದರೆ ಅಸಂಘಟಿತ ಕಟ್ಟಡ ಕಾರ್ಮಿಕರು ಅಕ್ಷರಸ್ಥರಾಗಿದ್ದಾರೆ.ತಮ್ಮ ವಿಧ್ಯಾಭ್ಯಾಸದ ನೆಲೆಯಲ್ಲಿ ಸ್ವ ಇಚ್ಛೆಯಿಂದಲೇ ಈ ಕೆಲಸವನ್ನು ಆರಿಸಿಕೊಂಡಿರುವುದನ್ನು ಕಾಣಬಹುದು.

ಮನುಷ್ಯನ ವೃತ್ತಿಗೆ ಯಾವುದೇ ಜಾತಿ ಯ ಅಡೆತಡೆ ಇರುವುದಿಲ್ಲ, ಹೀಗೆಯೇ ಅಸಂಘಟಿತ ಕಾರ್ಮಿಕರಲ್ಲಿ ಎಲ್ಲಾ ವರ್ಗದವರನ್ನು ಕಾಣಬಹುದು. ಅಸಂಘಟಿತ ಕಾರ್ಮಿಕರ ವರ್ಗ ಮತ್ತು ಜಾತಿವಾರು ವಿಂಗಡಣೆಯನ್ನು ಕೋಷ್ಟಕ ೪.೩ ರಲ್ಲಿ ನೀಡಲಾಗಿದೆ.

| *ಕ್ರ.ಸಂ* | *ಜಾತಿ* | *ಸಂಖ್ಯೆ* | *ಶೇಕಡಾವಾರು* |
|---|---|---|---|
| ೧ | ಮುಂದುವರಿದ | ೦೦ | ೦೦ |
| ೨ | ಹಿಂದುಳಿದ | ೩೮ | ೭೬ |
| ೩ | ಪರಿಶಿಷ್ಟ ಜಾತಿ | ೦೪ | ೦೮ |
| ೪ | ಪರಿಶಿಷ್ಟ ಪಂಗಡ | ೦೪ | ೦೮ |
| ೫ | ಅಲ್ಪಸಂಖ್ಯಾತರು | ೦೪ | ೦೮ |
| ೬ | ಇತರೆ ಹಿಂದುಳಿದ | ೦೦ | ೦೦ |
| | | ೫೦ | ೧೦೦ |




ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ ಶೇಕಡಾ ೭೬ರಷ್ಟು ಕಾರ್ಮಿಕರು ಹಿಂದುಳಿದ ವರ್ಗಕ್ಕೆ ಸೇರಿದವರಾಗಿದ್ದಾರೆ, ಶೇಕಡಾ ೮ ರಷ್ಟು ಕಾರ್ಮಿಕರು ಪರಿಶಿಷ್ಟ ಜಾತಿಗೆ ಸೇರಿದವರೂ, ಶೇಕಡಾ ೮ ರಷ್ಟು ಕಾರ್ಮಿಕರು ಪರಿಶಿಷ್ಟ ಪಂಗಡಕ್ಕೆ ಸೇರಿದವರೂ ಹಾಗೂ ಶೇಕಡಾ ೮ ರಷ್ಟು ಕಾರ್ಮಿಕರು ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದವರಾಗಿದ್ದಾರೆ. ಇದರಿಂದ ತಿಳಿಯುವುದೇನೆಂದರೆ ಎಲ್ಲಾ ವರ್ಗದ ಜನರು ಈ ವೃತ್ತಿಯನ್ನು ಅವಲಂಬಿಸಿಕೊಂಡಿದ್ದಾರೆ ಅದರಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದ ಕಾರ್ಮಿಕರು ಹೆಚ್ಚಾಗಿ ಈ ವೃತ್ತಿಯನ್ನು ಅವಲಂಬಿಸಿ ಮುಂದುವರೆಸುತ್ತಾ ಇದ್ದಾರೆ.

ಮನುಷ್ಯನು ತನ್ನ ಸಾಮರ್ಥ್ಯಕ್ಕಿಂತ ಹೆಚ್ಚಿಗೆ ದುಡಿಯಲು ಸಾಧ್ಯವಿಲ್ಲ ಆದರೆ ಕಟ್ಟಡ ಕಾರ್ಮಿಕರು ಅಸಂಘಟಿತ ವಲಯಗಳಲ್ಲಿ ಪುರುಷರು ಅವರ ವೇತನಕ್ಕಿಂತ ಹೆಚ್ಚಾಗಿ ದುಡಿಯುತ್ತಿರುವುದರ ವಿವರಣೆಯನ್ನು ಕೋಷ್ಟಕ ೪.೪ ರಲ್ಲಿ ನೀಡಲಾಗಿದೆ.

| ಕ್ರ.ಸಂ | ಸಮಯ | ಸಂಖ್ಯೆ | ಶೇಕಡಾವಾರು |
| --- | --- | --- | --- |
| ೧ | ೬ ಗಂಟೆ | ೨೪ | ೪೮ |
| ೨ | ೭ ಗಂಟೆ | ೧೨ | ೨೪ |
| ೩ | ೮ ಗಂಟೆ | ೧೪ | ೨೮ |
| | | ೫೦ | ೧೦೦ |




ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ ಶೇಕಡಾ ೪೮ ರಷ್ಟು ಕಾರ್ಮಿಕರು ದಿನದಲ್ಲಿ ೬ ಗಂಟೆಗಳ ಕಾಲ ದುಡಿಯುತ್ತಿದ್ದಾರೆ, ಶೇಕಡಾ ೨೪ ರಷ್ಟು ಕಾರ್ಮಿಕರು ದಿನದಲ್ಲಿ ೭ ಗಂಟೆಗಳ ಕಾಲ ದುಡಿಯುತ್ತಿದ್ದಾರೆ ಹಾಗೂ ಶೇಕಡಾ ೨೮ ರಷ್ಟು ಕಾರ್ಮಿಕರು ದಿನದಲ್ಲಿ ೮ ಗಂಟೆ ಕೆಲಸ ಮಾಡುತ್ತಾರೆ.ಇದರಿಂದ ತಿಳಿಯುವುದೇನೆಂದರೆ ಕಾರ್ಮಿಕರು ದಿನದಲ್ಲಿ ೬ ಗಂಟೆಗಳ ಕಾಲ ಕೆಲಸ ಮಾಡುತ್ತಾರೆ ಇದರಲ್ಲಿ ವಿಶ್ರಾಂತಿಯ ಸಮಯ ಒಳಗೊಂಡಿರುವುದಿಲ್ಲ. ಮಾಹಿತಿದಾರರು ತಮ್ಮ ವೇತನಕ್ಕೆ ಪೂರಕವಾಗಿ ದುಡಿಯುತ್ತಿದ್ದಾರೆ.

ಮನುಷ್ಯನು ತನ್ನ ಅವಶ್ಯಕತೆಗಳನ್ನು ಪೂರ್ತಿಗೊಳಿಸಲು ಯಾವುದೇ ಕೆಲಸ ಮಾಡಬಹುದು.ಆದರೆ ಅವನು ಅದೇ ಕೆಲಸದಲ್ಲಿ ಮುಂದುವರಿಯಲು ಬಯಸುತ್ತಾನೆಯೇ ಎಂಬ ವಿಷಯದ ಮೇಲೆ ಅವರ ಕೆಲಸ ಬಗ್ಗೆ ಅವರಿಗಿರುವ ಅಭಿಪ್ರಾಯವನ್ನು ತಿಳಿಯಬಹುದಾಗಿದೆ.ಇದರ ಮಾಹಿತಿಯನ್ನು ಕೋಷ್ಟಕ ೪.೫ ರಲ್ಲಿ ನೀಡಲಾಗಿದೆ.

| ಕ್ರ.ಸಂ | | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಹೌದು | ೪೪ | ೮೮ |
| ೨ | ಇಲ್ಲ | ೦೬ | ೧೨ |
| | | ೫೦ | ೧೦೦ |




ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ ಶೇಕಡಾ ೮೮ ರಷ್ಟು ಕಾರ್ಮಿಕರು ತಮ್ಮ ಕೆಲಸವನ್ನು ಇಷ್ಟಪಡುತ್ತಾರೆ,ಶೇಕಡಾ ೧೨ ರಷ್ಟು ಕಾರ್ಮಿಕರು ತಮ್ಮ ಕೆಲಸವನ್ನು ಇಷ್ಟಪಡುವುದಿಲ್ಲ. ಇದರಿಂದ ತಿಳಿಯುವುದೇನೆಂದರೆ ಹೆಚ್ಚಿನ ಕಾರ್ಮಿಕರು ತಮ್ಮ ವೃತ್ತಿಯನ್ನು ಇಷ್ಟಪಡುತ್ತಾರೆ ಯಾಕೆಂದರೆ ಕಾರ್ಮಿಕರು ಈ ವೃತ್ತಿಯಿಂದಲೇ ಸಮಾಜದ ಮುಖ್ಯ ವಾಹಿನಿಗೆ ಬಂದಿರುತ್ತಾರೆ. ಹಾಗೆ ಹೆಚ್ಚಿನ ಕಾರ್ಮಿಕರು ಈ ವೃತ್ತಿಯನ್ನು ಇಷ್ಟಪಡುತ್ತಿದ್ದಾರೆ.

ಮಾನವರು ತಮ್ಮ ಒತ್ತಡಗಳಿಗೆ ಅನುಗುಣವಾಗಿ ಒಂದೊಂದು ವಲಯದಲ್ಲಿ ದುಡಿಯುತ್ತಾರೆ. ಆದರೆ ಅವರಿಗೆ ಕೆಲಸದ ಭದ್ರತೆ ಇದ್ದಾಗ ಮಾತ್ರ ಅವರು ನೆಮ್ಮದಿಯಿಂದ ದುಡಿಯಲು ಸಾಧ್ಯ, ಅದರ ವಿವರಗಳನ್ನು ಕೋಷ್ಟಕ ೪.೬ ರಲ್ಲಿ ಕೊಡಲಾಗಿದೆ.

| ಕ್ರ.ಸಂ | | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಹೌದು | ೨೬ | ೫೨ |
| ೨ | ಇಲ್ಲ | ೨೪ | ೪೮ |
| | | ೫೦ | ೧೦೦ |




ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ ಶೇಕಡಾ ೫೨ ರಷ್ಟು ಕಾರ್ಮಿಕರು ಕೆಲಸದ ಭದ್ರತೆಯನ್ನು ಹೊಂದಿರುತ್ತಾರೆ, ಶೇಕಡಾ ೪೮ ರಷ್ಟು ಕಾರ್ಮಿಕರ ಅಭಿಪ್ರಾಯದಂತೆ ಯಾವುದೇ ಕೆಲಸದ ಭದ್ರತೆ ಇರುವುದಿಲ್ಲ. ಇದರಿಂದ ತಿಳಿಯುವುದೇನೆಂದರೆ ಹೆಚ್ಚಿನ ಕಾರ್ಮಿಕರು ತಾವು ಮಾಡುವ ಕೆಲಸದಲ್ಲಿ ಭದ್ರತೆಯನ್ನು ಹೊಂದಿರುತ್ತಾರೆ. ಅಭಿವೃದ್ಧಿ ಹೊಂದುತ್ತಿರುವ ಪೆರ್ನೆ ಗ್ರಾಮದಲ್ಲಿ ಇತರೇ ಉದ್ಯೋಗಗಳು ಇವೆ ಆದರೆ ಇತರ ಯಾವುದೇ ಉದ್ಯೋಗಗಳು ಇಷ್ಟೊಂದು ಭದ್ರತೆಯನ್ನು ಒದಗಿಸುವುದಿಲ್ಲ.

ಆರೋಗ್ಯವಂತ ಮನುಷ್ಯ ಎಂತಹ ಕಷ್ಟ ಬಂದರೂ ಎದುರಿಸಲು ಸಾಧ್ಯ.ಆದ್ದರಿಂದ ನಾವು ದುಡಿಯುವಲ್ಲಿ ನಮಗೆ ಆರೋಗ್ಯ ರಕ್ಷಣೆ ಬಹು ಮುಖ್ಯ ಅವುಗಳ ಬಗ್ಗೆ  ವಿವರಣೆಯನ್ನು ಕೋಷ್ಟಕ ೪.೭ ರಲ್ಲಿ ನೀಡಲಾಗಿದೆ.

| ಕ್ರ.ಸಂ | | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಹೌದು | ೩೪ | ೬೮ |
| ೨ | ಇಲ್ಲ | ೧೬ | ೩೨ |
| | | ೫೦ | ೧೦೦ |




ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ  ಶೇಕಡಾ ೬೮ ರಷ್ಟು ಕಾರ್ಮಿಕರು ತಮ್ಮ ಆರೋಗ್ಯ ರಕ್ಷಣೆಯನ್ನು ಹೊಂದಿರುತ್ತಾರೆ, ಶೇಕಡಾ ೩೨ ರಷ್ಟು ಕಾರ್ಮಿಕರು ಯಾವುದೇ ಆರೋಗ್ಯ ರಕ್ಷಣೆಯನ್ನು ಹೊಂದಿರುವುದಿಲ್ಲ. ಇದರಿಂದ ತಿಳಿಯುವುದೇನೆಂದರೆ ಹೆಚ್ಚಿನ ಕಾರ್ಮಿಕರು ಆರೋಗ್ಯದ ಕಡೆ ಹೆಚ್ಚಿನ ಗಮನವನ್ನು ಕೊಟ್ಟು ತಮ್ಮ ಆರೋಗ್ಯ ರಕ್ಷಣೆಗೆ ಬೇಕಾದ ಪೂರಕ ವ್ಯವಸ್ಥೆಗಳನ್ನು ಮಾಡಿಕೊಂಡಿದ್ದಾರೆ.

ಮಾನವನು ಎಷ್ಟೇ ದುಡಿದರೂ ಮಾನಸಿಕವಾಗಿ ಗಟ್ಟಿಯಾಗಿದ್ದರೆ ಮಾತ್ರ ಯಾವುದೇ ಕಷ್ಟವನ್ನು ಎದುರಿಸಲು ಸಾಧ್ಯ. ಈ ಮಾನಸಿಕ ಒತ್ತಡಗಳ ಬಗ್ಗೆ ವಿವರಣೆಯನ್ನು ಕೋಷ್ಟಕ ೪.೮ ರಲ್ಲಿ ನೀಡಲಾಗಿದೆ.

| ಕ್ರ.ಸಂ | | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಹೌದು | ೦೪ | ೦೮ |
| ೨ | ಇಲ್ಲ | ೪೬ | ೯೨ |
| | | ೫೦ | ೧೦೦ |








ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ ಶೇಕಡಾ ೮ ರಷ್ಟು ಕಾರ್ಮಿಕರ ಅಭಿಪ್ರಾಯದಂತೆ ಕೆಲಸ ಮಾಡುವಾಗ ಮಾನಸಿಕ ಒತ್ತಡವನ್ನು ಅನುಭವಿಸುತ್ತಿದ್ದಾರೆ, ಶೇಕಡಾ ೯೨ ರಷ್ಟು ಕಾರ್ಮಿಕರ ಅಭಿಪ್ರಾಯದಂತೆ ಕೆಲಸದಲ್ಲಿ ಯಾವುದೇ ಮಾನಸಿಕ ಒತ್ತಡ ಇರುವುದಿಲ್ಲ. ಇದರಿಂದ ತಿಳಿಯುವುದೇನೆಂದರೆ ಮಾನಸಿಕ ಒತ್ತಡಗಳಿದ್ದಾಗ ಯಾವುದೇ ಕೆಲಸವನ್ನು ಸರಿಯಾಗಿ ನಿಭಾಯಿಸಲು ಕಷ್ಟ ಆದರೆ ಯಾವುದೇ ಕೆಲಸ ಮಾಡುವ ಜಾಗದಲ್ಲಿ ಒತ್ತಡಗಳು ಇಲ್ಲದೆ ಇದ್ದರೆ ಕೆಲಸವನ್ನು ಸರಾಗವಾಗಿ ಮಾಡಿ ಮುಗಿಸಬಹುದು.

ಸಾಮಾನ್ಯವಾಗಿ ತಮ್ಮ ವಿದ್ಯಾಭ್ಯಾಸಕ್ಕೂ ನಾವು ಮಾಡುವ ಕೆಲಸಕ್ಕೂ ಸಂಬಂಧ ಇದ್ದಲ್ಲಿ ನಾವು ಆ ಕೆಲಸವನ್ನು ಸರಿಯಾಗಿ ತೃಪ್ತಿಯಿಂದ ಮಾಡಲು ಸಾಧ್ಯ. ಇದರ ಬಗ್ಗೆ ವಿವರಗಳನ್ನು ಕೋಷ್ಟಕ ೪.೯.ರಲ್ಲಿ ನೀಡಲಾಗಿದೆ.

| ಕ್ರ.ಸಂ | | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಹೌದು | ೦೬ | ೧೨ |
| ೨ | ಇಲ್ಲ | ೪೪ | ೮೮ |
| | | ೫೦ | ೧೦೦ |




ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ ಶೇಕಡಾ ೧೨ ರಷ್ಟು ಕಾರ್ಮಿಕರ ಅಭಿಪ್ರಾಯದಂತೆ ಅವರ ವಿದ್ಯಾಭ್ಯಾಸಕ್ಕೂ ಕೆಲಸಕ್ಕೂ ಪರಸ್ಪರ ಸಂಬಂಧವಿರುವುದನ್ನು ಕಾಣಬಹುದು, ಶೇಕಡಾ ೮೮ ರಷ್ಟು ಕಾರ್ಮಿಕರ ಅಭಿಪ್ರಾಯದಂತೆ ತಮ್ಮ ವಿದ್ಯಾಭ್ಯಾಸಕ್ಕೂ ಕೆಲಸಕ್ಕೂ ಯಾವುದೇ ಸಂಬಂಧವಿರದಿರುವುದನ್ನು ಕಾಣಬಹುದು.ಇದರಿಂದ ತಿಳಿಯುವುದೇನೆಂದರೆ ಹೆಚ್ಚಿನ ಕಾರ್ಮಿಕರು ಪ್ರಾಥಮಿಕ ಶಿಕ್ಷಣವನ್ನಷ್ಟೇ ಪೂರ್ತಿಗೊಳಿಸಿರುತ್ತಾರೆ, ಇವರೆಲ್ಲರೂ ತಮ್ಮ ಸ್ವ ಇಚ್ಚೆಯಿಂದಲೇ ಕೆಲಸವನ್ನು ಕಲಿತು ಇತರರಿಗೂ ಕೆಲಸವನ್ನು ಕಲಿಸುತ್ತಿದ್ದಾರೆ. ಸಾಧನೆಗೆ ಸ್ವ ಪ್ರಯತ್ನ ಅಗತ್ಯ ಎಂದು ತಿಳಿಯಬಹುದು.

ಸಾಮಾನ್ಯವಾಗಿ ಮನುಷ್ಯ ತನ್ನ ಹೊಟ್ಟೆಪಾಡಿಗಾಗಿ ಒಂದಲ್ಲ ಒಂದು ಉದ್ಯೋಗವನ್ನು ಹರಸುತ್ತಾನೆ .ಅದರ ನಂತರ ಯಾಕಾಗಿ ಈ ಉದ್ಯೋಗ ಎಂದು ತಿಳಿಯಬಹುದು.ಇದಕ್ಕೆ ಸಂಬಂಧಿಸಿದ ವಿವರಗಳನ್ನು ಕೋಷ್ಟಕ ೪.೧೦ ರಲ್ಲಿ ನೀಡಲಾಗಿದೆ.

| ಕ್ರ.ಸಂ | ಕಾರಣ | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಹಣಕಾಸಿನ ಅವಶ್ಯಕತೆ | ೧೪ | ೨೮ |
| ೨ | ಬೇರೆ ಕೆಲಸ ಸಿಗದಿರುವುದು | ೦೨ | ೦೪ |
| ೩ | ಸ್ವ ಇಚ್ಚೆ | ೩೪ | ೬೮ |
| ೪ | ಇತರೇ | ೦೦ | ೦೦ |
| | | ೫೦ | ೧೦೦ |




ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ ಶೇಕಡಾ ೨೮ ರಷ್ಟು ಕಾರ್ಮಿಕರು ಹಣಕಾಸಿನ ಅವಶ್ಯಕತೆಗಾಗಿ,ಶೇಕಡಾ ೪ ರಷ್ಟು ಕಾರ್ಮಿಕರು ಬೇರೆ ಕೆಲಸ ಸಿಗದಿರುವ ಕಾರಣಕ್ಕಾಗಿ, ಶೇಕಡಾ ೬೮ ರಷ್ಟು ಕಾರ್ಮಿಕರು ಸ್ವ ಇಚ್ಚೆಯಿಂದ ಈ ವಲಯವನ್ನು ಆಯ್ಕೆ ಮಾಡಿಕೊಂಡಿರುತ್ತಾರೆ. ಇದರಿಂದ ತಿಳಿಯುವುದೇನೆಂದರೆ ಹೆಚ್ಚಿನ ಕಾರ್ಮಿಕರು ಸ್ವ ಇಚ್ಚೆಯಿಂದ ಈ ವಲಯನ್ನು ಆಯ್ಕೆ ಮಾಡಿ ಅದರಿಂದಲೇ ತಮ್ಮ ಜೀವನವನ್ನು ಸಾಗಿಸುತಿದ್ದಾರೆ. ಕಾರ್ಮಿಕರ ವರ್ಷ ಮತ್ತು ವಿಧ್ಯಾಭ್ಯಾಸಕ್ಕೆ ಹೋಲಿಸಿದಾಗ ಹೆಚ್ಚಿನ ಕಾರ್ಮಿಕರು ಮಧ್ಯಮ ವಯಸ್ಸಿಗೆ ಸೇರಿದವರಾಗಿದ್ದು ಹಾಗೂ ಹೆಚ್ಚಿನ ಕಾರ್ಮಿಕರು ಪ್ರಾಥಮಿಕ ಶಿಕ್ಷಣವನ್ನೂ ಮಾತ್ರ ಪೂರ್ತಿಗೊಳಿಸಿರುತ್ತಾರೆ. ಇದರಿಂದ ತಿಳಿಯುವುದೇನೆಂದರೆ ವಯಸ್ಸು ಕೂಡಾ ಆಗಿರುವುದರಿಂದ ಹಾಗೂ ಶಿಕ್ಷಣದ ಪ್ರಮಾಣವು ಕಡಿಮೆ ಇರುವುದರಿಂದ ಅಸಂಘಟಿತ ಕಾರ್ಮಿಕರು ಸ್ವ ಇಚ್ಛೆಯಿಂದ ಈ ಉದ್ಯೋಗವನ್ನು ಆರಿಸಿಕೊಂಡಿದ್ದಾರೆ.

ಮನುಷ್ಯ ಬಿಡುವಿಲ್ಲದೆ ಕೆಲಸ ಮಾಡಲು ಅಸಾಧ್ಯ. ಹೀಗೆ ದಿನದಲ್ಲಿ ೮ ಗಂಟೆ ದುಡಿಯುವಾಗ ಮಧ್ಯದಲ್ಲಿ ಬಿಡುವು ಇದ್ದರೆ ಕೆಲಸವನ್ನು ನಿರಾಯಾಸವಾಗಿ ಕೊನೆಗೊಳಿಸಬಹುದು. ಇದಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ಕೋಷ್ಟಕ ೪.೧೧ ರಲ್ಲಿ ನೀಡಲಾಗಿದೆ.

| ಕ್ರ.ಸಂ | ಅವಧಿ | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ೧/೨ ಗಂಟೆ | ೦೦ | ೦೦ |
| ೨ | ೧ ಗಂಟೆ | ೩೦ | ೬೦ |
| ೩ | ೨ ಗಂಟೆ | ೨೦ | ೪೦ |
| | | ೫೦ | ೧೦೦ |




ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ ಶೇಕಡಾ ೬೦ ರಷ್ಟು ಕಾರ್ಮಿಕರು ಕೆಲಸದ ಮಧ್ಯೆ ೧ ಗಂಟೆಗಳ ಕಾಲ ಬಿಡುವು ಎಂಬ ಅಭಿಪ್ರಾಯವನ್ನು ಕೊಟ್ಟಿರುತ್ತಾರೆ,ಶೇಕಡಾ ೪೦ ರಷ್ಟು ಕಾರ್ಮಿಕರು ಕೆಲಸದ ಮಧ್ಯೆ ೨ ಗಂಟೆಗಳ ಕಾಲ ಬಿಡುವು ಇರುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಇದರಿಂದ ತಿಳಿಯುವುದೇನೆಂದರೆ ಕೆಲಸದ ಮಧ್ಯೆ ಬಿಡುವು ಎಂಬುದು ಎಲ್ಲಾ ಕಾರ್ಮಿಕರಿಗೆ ಅನಿವಾರ್ಯ ಅತಿಯಾದ ಬಿಡುವು ಮಾನವನನ್ನು ಸೋಮಾರಿಯನ್ನಾಗಿ ಮಾಡುತ್ತದೆ.ಹೀಗೆ ಹೆಚ್ಚಿನ ಕಾರ್ಮಿಕರು ತಮ್ಮ ಕೆಲಸದ ಮಧ್ಯೆ ಕನಿಷ್ಟ ೧ ಗಂಟೆಗಳ ಕಾಲ ಬಿಡುವನ್ನು ತೆಗೆದುಕೊಳ್ಳುತ್ತಿದ್ದಾರೆ.

ಅಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರಿಗೆ ವರ್ಷದ ಎಲ್ಲಾ ದಿನವೂ ಕೆಲಸ ಇರುವುದಿಲ್ಲ. ಕೆಲವು ದಿನಗಳ ಕಾಲ ಅವರು ಬೇರೆ ಉದ್ಯೋಗವನ್ನು ಅವಲಂಭಿಸಬೇಕಾಗುತ್ತದೆ. ಇದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಕೆಳಗಿನ ಕೋಷ್ಟಕ ೪.೧೨ ರಲ್ಲಿ ನೀಡಲಾಗಿದೆ.

| ಕ್ರ.ಸಂ | ಸಮಯ | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಒಂದು ವಾರ | ೪೬ | ೯೨ |
| ೨ | ಒಂದು ತಿಂಗಳು | ೦೪ | ೦೮ |
| ೩ | ಎರಡು ತಿಂಗಳು | ೦೦ | ೦೦ |
| ೪ | ಎರಡಕ್ಕಿಂತ ಅಧಿಕ | ೦೦ | ೦೦ |
| | | ೫೦ | ೧೦೦ |




ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ ಶೇಕಡಾ ೯೨ ರಷ್ಟು ಕಾರ್ಮಿಕರಿಗೆ ಒಂದು ವಾರಗಳ ಕಾಲ ಕೆಲಸವಿರುವುದಿಲ್ಲ, ಶೇಕಡಾ ೮ ರಷ್ಟು ಕಾರ್ಮಿಕರಿಗೆ ಒಂದು ತಿಂಗಳ ಕಾಲ ಕೆಲಸವಿರುವುದಿಲ್ಲ.ಇದರಿಂದ ತಿಳಿಯುವುದೇನೆಂದರೆ ಕೆಲವೊಂದು ಸಂದರ್ಭಗಳಲ್ಲಿ ಕಾರ್ಮಿಕರಿಗೆ ಕೆಲಸಗಳೇ ಇರುವುದಿಲ್ಲ ಹೆಚ್ಚಿನ ಕಾರ್ಮಿಕರಿಗೆ ಒಂದು ವಾರಗಳ ಕಾಲ ಕೆಲಸವಿರುವುದಿಲ್ಲ ಅದೂ ಕೂಡಾ ಮಳೆಗಾಲದಲ್ಲಿ ಆ ಸಮಯದಲ್ಲಿ ಅವರು ಬೇರೆ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ.

ಸಾಮಾನ್ಯವಾಗಿ ಅಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರು ಬಡವರಾಗಿದ್ದು ಅವರ ದುಡಿಮೆಯನ್ನು ಅವರ ಕುಟುಂಬ ಅವಲಂಭಿಸಿರುತ್ತದೆ.ಇದರ ಬಗ್ಗೆ ಮಾಹಿತಿಯನ್ನು ಕೋಷ್ಟಕ ೪.೧೩ ರಲ್ಲಿ ನೀಡಲಾಗಿದೆ.

| *ಕ್ರ.ಸಂ* | *ವೇತನ ಅವಲಂಬನೆ* | *ಸಂಖ್ಯೆ* | *ಶೇಕಡಾವಾರು* |
|---|---|---|---|
| ೧ | 0% | ೦೦ | ೦೦ |
| ೨ | ೫0% | ೧೦ | ೨೦ |
| ೩ | ೭೫% | ೦೬ | ೧೨ |
| ೪ | ೧00% | ೩೪ | ೬೮ |
| | | ೫೦ | ೧೦೦ |




ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ ಶೇಕಡಾ ೨೦ ರಷ್ಟು ಕಾರ್ಮಿಕರು ತಮ್ಮ ವೇತನದ ೫0% ನ್ನು ಅವರ ಕುಟುಂಬವು ಅವಲಂಬಿಸಿರುತ್ತದೆ, ಶೇಕಡಾ ೧೨ ರಷ್ಟು ಕಾರ್ಮಿಕರು ತಮ್ಮ ವೇತನದ ೭೫% ನ್ನು ಅವರ ಕುಟುಂಬವು ಅವಲಂಭಿಸಿರುತ್ತದೆ.ಹಾಗೂ ಉಳಿದ ಶೇಕಡಾ ೬೮ ರಷ್ಟು ಕಾರ್ಮಿಕರು ಅವರ ದುಡಿಮೆಯ ಎಲ್ಲಾ ಭಾಗವನ್ನು ಅಂದರೆ ೧೦೦% ನ್ನು ಅವರ ಕುಟುಂಬವು ಅವಲಂಭಿಸಿದೆ.ಇದರಿಂದ ತಿಳಿಯುವುದೇನೆಂದರೆ ಕಾರ್ಮಿಕರ ಆದಾಯವನ್ನು ಅವಲಂಬಿಸದ ಕುಟುಂಬಗಳೇ ಇಲ್ಲ.ಇದರಿಂದ ಕಾರ್ಮಿಕರು ತಮ್ಮ ದುಡಿಮೆಯಿಂದ ಕುಟುಂಬದ ಜವಾಬ್ದಾರಿಯನ್ನು ನಿಭಾಯಿಸುತ್ತಾರೆ.

ಸಾಮಾನ್ಯವಾಗಿ ಎಲ್ಲರೂ ದುಡಿಯುವುದು ಅವರವರ ಅವಶ್ಯಕತೆಗಳನ್ನು ಈಡೇರಿಸಲು ಈ ವೇತನದ ಖರ್ಚಿನ ಉದ್ದೇಶವು ಯಾವ ರೀತಿ ವಿನಿಯೋಗವಾಗುತ್ತದೆ ಎಂಬುದು ಇಲ್ಲಿ ಬಹು ಮುಖ್ಯವಾಗುತ್ತದೆ.ಇದರ ಬಗ್ಗೆ ವಿವರಣೆಯನ್ನು ಕೋಷ್ಟಕ ೪.೧೪ ರಲ್ಲಿ ನೀಡಲಾಗಿದೆ.

| *ಕ್ರ.ಸಂ* | *ಉದ್ದೇಶ* | *ಸಂಖ್ಯೆ* | *ಶೇಕಡಾವಾರು* |
|---|---|---|---|
| ೧ | ಉಳಿತಾಯ | ೧೬ | ೩೨ |
| ೨ | ಮನೆಖರ್ಚು | ೨೦ | ೪೦ |
| ೩ | ಸಾಲ ತೀರಿಸಲು | ೧೪ | ೨೮ |
| ೪ | ವಸ್ತ್ರಾಭರಣ ಖರೀದಿ | ೦೦ | ೦೦ |
| | | ೫೦ | ೧೦೦ |




ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ ಶೇಕಡಾ ೩೨ ರಷ್ಟು ಕಾರ್ಮಿಕರು ಉಳಿತಾಯದ ಉದ್ದೇಶಕ್ಕಾಗಿ ದುಡಿಯುತ್ತಾರೆ,ಶೇಕಡಾ ೪೦ ರಷ್ಟು ಕಾರ್ಮಿಕರು ಮನೆಖರ್ಚು ನಿಭಾಯಿಸಲು ದುಡಿಯುತ್ತಾರೆ, ಶೇಕಡಾ ೨೮ ರಷ್ಟು ಕಾರ್ಮಿಕರು ಸಾಲ ತೀರಿಸಲಿಕ್ಕಾಗಿ ತಮ್ಮ ವೇತನವನ್ನು ಉಪಯೋಗಿಸುತ್ತಾರೆ.ಇದರಿಂದ ತಿಳಿಯುವುದೇನೆಂದರೆ ಹೆಚ್ಚಿನ ಕಾರ್ಮಿಕರು ಮನೆಖರ್ಚು ತೀರಿಸಲಿಕ್ಕಾಗಿ ದುಡಿಯುತ್ತಾರೆ. ಅಸಂಘಟಿತ ಕಾರ್ಮಿಕರು ಬಡವರಾಗಿದ್ದು ತಮ್ಮ ಮೂಲ ಅಗತ್ಯಗಳನ್ನು ಈಡೇರಿಸಲು ಅವರು ತಮ್ಮ ವೇತನವನ್ನು ಉಪಯೋಗಿಸುತ್ತಾರೆ.

ಕಾರ್ಮಿಕರು ದಿವನಿ ಅವಶ್ಯಕತೆಗಾಗಿ ತಮ್ಮ ಆದಾಯದಿಂದ ಸಾಧ್ಯವಾಗದಿದ್ದಾಗ ತಮ್ಮ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ವಿವಿಧ ಮೂಲಗಳಿಂದ ಸಾಲವನ್ನು ಮಾಡುತ್ತಿದ್ದಾರೆ. ಇದರ ವಿವರಗಳನ್ನು ಕೋಷ್ಟಕ ೪.೧೫ ರಲ್ಲಿ ನೀಡಲಾಗಿದೆ.

| ಕ್ರ.ಸಂ | ಸಾಲದ ಮೊತ್ತ | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ೧೦೦೦೦ ಕ್ಕಿಂತ ಕಡಿಮೆ | ೦೮ | ೧೬ |
| ೨ | ೧೦೦೦೦-೨೦೦೦೦ | ೦೪ | ೦೮ |
| ೩ | ೨೦೦೦೦-೪೦೦೦೦ | ೦೬ | ೧೨ |
| ೪ | ೫೦೦೦೦ ಗಿಂತ ಅಧಿಕ | ೩೨ | ೬೪ |
| | | ೫೦ | ೧೦೦ |




ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ ಶೇಕಡಾ ೧೬ ರಷ್ಟು ಕಾರ್ಮಿಕರು ೧೦೦೦೦ ಗಿಂತ ಕಡಿಮೆ ಸಾಲವನ್ನು ಮಾಡಿರುತ್ತಾರೆ,ಶೇಕಡಾ ೮ ರಷ್ಟು ಕಾರ್ಮಿಕರು ೧೦೦೦೦-೨೦೦೦೦ ಸಾಲವನ್ನು ಮಾಡಿರುತ್ತಾರೆ,ಶೇಕಡಾ ೧೨ ರಷ್ಟು ಕಾರ್ಮಿಕರು ೨೦೦೦೦-೪೦೦೦೦ ಸಾಲವನ್ನು ಮಾಡಿರುತ್ತಾರೆ ಹಾಗೂ ಉಳಿದ ಶೇಕಡಾ ೬೪ ಕಾರ್ಮಿಕರು ೫೦೦೦೦ ಗಿಂತ ಅಧಿಕ ಸಾಲವನ್ನು ಮಾಡಿರುತ್ತಾರೆ.ಇದರಿಂದ ತಿಳಿಯುವುದೇನೆಂದರೆ ಹೆಚ್ಚಿನ ಕಾರ್ಮಿಕರು ೫೦೦೦೦ ಗಿಂತ ಅಧಿಕ ಸಾಲವನ್ನು ಮಾಡಿರುತ್ತಾರೆ.ಈ ಸಾಲದ ಉದ್ದೇಶ ಅಸಂಘಟಿತ ಕಾರ್ಮಿಕರಿಗೆ ತನಗೆ ಸಿಗುವ ಸಂಬಳದಿಂದ ದಿನನಿತ್ಯದ ಅವಶ್ಯಕತೆಗಳನ್ನು ಈಡೇರಿಸಲು ಮಾತ್ರ ಸಾಧ್ಯವಾಗುತ್ತದೆ. ಇವುಗಳಲ್ಲಿ ಹೆಚ್ಚಿನವರು ವಿವಿಧ ಮೂಲಗಳಿಂದ ತೆಗೆದ ಸಾಲ ಮನೆ ನಿರ್ಮಾಣಕ್ಕೆ ಸಂಬಂಧಿಸಿದ್ದಾಗಿದೆ.

ಅಸಂಘಟಿತ ಕಟ್ಟಡ ಕಾರ್ಮಿಕರು ತಮ್ಮ ಕೆಲಸದ ಮೂಲಕ ಸಮಾಜದಲ್ಲಿ ತಮ್ಮನ್ನು ತಾವು ಗುರುತಿಸಿಕೊಂಡಿದ್ದಾರೆ.ಇದಕ್ಕೆ ಸಂಬಂಧಿಸಿದ ಮಾಹಿಗಳನ್ನು ಕೋಷ್ಟಕ ೪.೧೬ ರಲ್ಲಿ ನೀಡಲಾಗಿದೆ.

| ಕ್ರ.ಸಂ | ಗುರುತಿಸುವ ರೀತಿ | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಕೌಶಲ್ಯ ಸಹಿತ ಕೆಲಸಗಾರನನ್ನಾಗಿ | ೪೦ | ೮೦ |
| ೨ | ಕಡಿಮೆ ಸಂಬಳಕ್ಕಾಗಿ | ೦೬ | ೧೨ |
| ೩ | ಸಮಯಪ್ರಜ್ಞೆ | ೦೪ | ೦೮ |
| | | ೫೦ | ೧೦೦ |




ಈ ಮೇಲ್ಕಂಡ ಅಂಕಿ ಅಂಶಗಳ ಪ್ರಕಾರ ಶೇಕಡಾ ೮೦ ರಷ್ಟು ಕಾರ್ಮಿಕರನ್ನು ಜನರು ಕೌಶಲ್ಯ ಸಹಿತ ಕೆಲಸಗಾರನನ್ನಾಗಿ ಗುರುತಿನುತ್ತಾರೆ, ಶೇಕಡಾ ೧೨ ರಷ್ಟು ಕಾರ್ಮಿಕರನ್ನು ಕಡಿಮೆ ಸಂಬಳಕ್ಕಾಗಿ ಜನರು ಗುರುತಿಸುತ್ತಾರೆ, ಶೇಕಡಾ ೮ ರಷ್ಟು ಕಾರ್ಮಿಕರನ್ನು ಜನರು ಸಮಯದ ಪರಿಪಾಲನೆಯ ದೃಷ್ಟಿಯಿಂದ ಗುರುತಿಸುತ್ತಾರೆ. ಇದರಿಂದ ತಿಳಿಯುವುದೇನೆಂದರೆ ಹೆಚ್ಚಿನ ಕಾರ್ಮಿಕರನ್ನು ಅವರ ಕೌಶಲ್ಯದಿಂದಾಗಿ ಜನರು ಗುರುತಿಸುತ್ತಾರೆ ಯಾಕೆಂದರೆ ಅವರು ಕೆಲಸವನ್ನು ಕ್ಲಪ್ತ ಸಮಯದಲ್ಲಿ ಕೊನೆಗೊಳಿಸುತ್ತಾರೆ.

ಮೇಲಿನ ವಿಶ್ಲೇಷಣೆಯನ್ನು ಗಮನಿಸಿದಾಗ ಕಟ್ಟಡ ಕಾರ್ಮಿಕರು ತಕ್ಕಮಟ್ಟಿಗೆ ವಿಧ್ಯಾವಂತರಾಗಿದ್ದಾರೆ,ಅವರ ಆರ್ಥಿಕ ಪರಿಸ್ಥಿತಿ ಉತ್ತಮವಾಗಿಲ್ಲದೆ ಇರುವುದರಿಂದ ಅವರಿಗೆ ವಿಧ್ಯಾಭ್ಯಾಸವನ್ನು ಮುಂದುವರಿಸಲು ಸಾಧ್ಯವಾಗದೆ ಈ ಕೆಲಸಕ್ಕೆ ಸೇರಬೇಕಾಯಿತು.ಮನೆ ನಡೆಸಲು ಹಣದ ಅವಶ್ಯಕತೆ ಇದ್ದು ಅದಕ್ಕಾಗಿ ಕಟ್ಟಡ ಕಾರ್ಮಿಕ ವೃತ್ತಿಯನ್ನು ಆಯ್ಕೆ ಮಾಡಿರುತ್ತಾರೆ.ಕೆಲವರಿಗೆ ಈ ಉದ್ಯೋಗದಲ್ಲಿ ಮುಂದುವರಿಯಲು ಇಷ್ಟವಿಲ್ಲ, ಬೇರೆ ಯಾವುದಾದರೂ ಉತ್ತಮ ಕೆಲಸ ಸಿಕ್ಕಿದಲ್ಲಿ ಈ ಉದ್ಯೋಗವನ್ನು ಬಿಡುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆದರೆ ಹೆಚ್ಚಿನ ಕಾರ್ಮಿಕರು ಇದೇ ವಲಯದಲ್ಲಿ ಮುಂದುವರಿಯಲು ಇಷ್ಟವಿದೆ ಎಂದು ತಿಳಿಸಿರುತ್ತಾರೆ ಯಾಕೆಂದರೆ ಅವರ ವಿಧ್ಯಾಭ್ಯಾಸವು ಉತ್ತಮವಾಗಿಲ್ಲ,ಈ ಉದ್ಯೋಗದಿಂದಲೇ ಸಮಾಜದಲ್ಲಿ ಗುರುತಿಸಿಕೊಂಡಿದ್ದಾರೆ,ಬೇರೆ ಉದ್ಯೋಗದ ಕಡೆಗೆ ಒಲವು ತೋರಿಸಿರುವುದಿಲ್ಲ.

ಈ ಅಧ್ಯಾಯದಲ್ಲಿ ಪ್ರಶ್ನಾವಳಿಯ ಮೂಲಕ ಸಂಗ್ರಹಿಸಿದ ಮಾಹಿತಿಯನ್ನು ಸ್ಥೂಲವಾಗಿ ವಿವರಿಸಲಾಯಿತು ,ಮುಂದಿನ ಅಧ್ಯಾಯದಲ್ಲಿ ಅಸಂಘಟಿತ ಕಟ್ಟಡ ಕಾರ್ಮಿಕರ ಈ ಉದ್ಯೊಗ ವಲಯದಲ್ಲಿ ಮುಂದುವರಿಯಲು ಕಾರಣವಾದ ಅಂಶಗಳನ್ನು ವಿವರಿಸಲಾಗಿದೆ.

ಹಿಂದಿನ ಅಧ್ಯಾಯದಲ್ಲಿ ಮಾಹಿತಿ ವಿಶ್ಲೇಷಣೆಯ ಮೂಲಕ ವಿಷಯವನ್ನು ಸಂಗ್ರಹಿಸಿ ದೊರೆತ ಮಾಹಿತಿಯನ್ವಯ ವಿವರಿಸಿದ ನಂತರ ಪ್ರಸ್ತುತ ಅಧ್ಯಾಯದಲ್ಲಿ ಅಸಂಘಟಿತ ಕಾರ್ಮಿಕರು ಯಾಕೆ ಈ ವಲಯದಲ್ಲೇ ಮುಂದುವರಿದಿದ್ದಾರೆ ಎಂದು ಚರ್ಚಿಸಲಾಗಿದ್ದು ಹಾಗೂ ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗದ ಬಗ್ಗೆಯೂ ವಿವರಣೆಯನ್ನು ನೀಡಲಾಗಿದೆ.

ಭಾರತದ ಕಾರ್ಮಿಕ ಕಾನೂನುಗಳು ನಮ್ಮದಲ್ಲ, ಅವುಗಳು ಅತ್ಯಂತ ಪೈಪೋಟಿಯತ್ತ ಮಾರುಕಟ್ಟೆಯಲ್ಲಿ ಕಾರ್ಯನಿರ್ವಹಿಸಬೇಕಾದ ಉದ್ಯಮಗಳಿಗೆ ಅವಕಾಶವಿರುವ ನವ್ಯತೆಯನ್ನು ಒದಗಿಸಿ ಕೊಟ್ಟಿಲ್ಲ. ವಾಸ್ತವವಾಗಿ ಅವುಗಳ ಉದ್ಯೋಗಾವಕಾಶಗಳ ನಿರ್ಮಾಕ್ಕೆ ಅವಕಾಶ ನೀಡುತ್ತಿಲ್ಲ. ಪ್ರಸ್ತುತ ಅಸ್ತಿತ್ವದಲ್ಲಿರುವ ಕಾರ್ಮಿಕ ಕಾನೂನುಗಳು ವ್ಯವಹಾರ ಮರುಹೊಂದಾಣಿಕೆ ಮತ್ತು ಮರು ಸಂಘಟನೆಯ ಪ್ರಕ್ರಿಯೆಗೆ ತೊಡಕಾಗಿ ಪರಿಚಯಿಸುವ ಮತ್ತು ಕಾರ್ಮಿಕ ಕಾನೂನುಗಳಿಗೆ ತಿದ್ದುಪಡಿ ತಂದು ಅವುಗಳನ್ನು ಇತರ ರಾಷ್ಟ್ರಗಳ ಕಾನೂನು ಕ್ರಮಗಳ ಆಚರಣೆಗಳಿಗೆ ಸಮಗೊಳಿಸಬೇಕಾದ ಕಾಲ ಸನ್ನಿಹಿತವಾಗಿದೆ.

ಅಸಂಘಟಿತ ವಲಯವು ಹಲವು ಸಂಕಷ್ಟಗಳಿಂದ ನರಳುತ್ತಿದೆ ಕಡಿಮೆ ಸಂಬಳ ಸಾಮಾಜಿಕ ಆರೋಗ್ಯ ಭದ್ರತೆ ಇಲ್ಲದಿರುವುದು ಸೇರಿದಂತೆ ಸದಾ ಅನಿಶ್ಚಿತತೆಯ ವಾತಾವಣದಲ್ಲಿ ಬದುಕುವ ಸ್ಥಿತಿ ದೇಶದ ಅಸಂಘಟಿತ ಕಾರ್ಮಿಕರದ್ದಾಗಿದೆ . ಅಸಂಘಟಿತ ಕಾರ್ಮಿಕರಲ್ಲಿ ಬಹುಪಾಲು ಜನ ಕೃಷಿ ಕ್ಷೇತ್ರವೊಂದರಲ್ಲೇ ಕೆಲಸ ಮಾಡುತ್ತಿದ್ದಾರೆ. ಈ ವಲಯದಲ್ಲಿ ನಿರಂತರ ಉದ್ಯೋಗ ಇರುವುದರಿಂದ ಕಾರ್ಮಿಕರು ಅನಿವಾರ್ಯವಾಗಿ ವಲಸೆ ಹೋಗುತ್ತಾರೆ. ನಗರಗಳಲ್ಲಿ ಅತಿ ಕಡಿಮೆ ಸಂಬಳಕ್ಕೆ ಹೆಚ್ಚು ಅವಧಿಗೆ ದುಡಿಯುತ್ತಾ ಜೀವನ ಸಾಗಿಸುತ್ತಿದ್ದಾರೆ . ಆದರೆ ಪೂರ್ವದಿಂದ ಇಂದಿನವರೆಗೂ ಅಸಂಘಟಿತ ಕಾರ್ಮಿಕರ ಜೀವನಮಟ್ಟ ಉತ್ತಮವಾಗಿಲ್ಲ.

ಅಸಂಘಟಿತ ವಲಯವನ್ನು ನಾಲ್ಕು ವಿಭಾಗವಾಗಿ ಗುರುತಿಸಲಾಗಿದೆ,ಸಂಖ್ಯೆ,ಸಮಸ್ಯೆ ಗುರುತಿಸುವಿಕೆ ಸೌಲಭ್ಯ ಹಂಚಿಕೆ ನಿಟ್ಟಿನಲ್ಲಿ ಈ ವಿಭಾಗಗಳನ್ನು ಗುರುತಿಸಲಾಗಿದೆ. ಮೊದಲ ವಿಭಾಗದಡಿ ಸಣ್ಣ ರೈತರು ಭೂ ರಹಿತ ಕೃಷಿ ಕಾರ್ಮಿಕರು ಬಂದರೆ ಎರಡನೆಯ ವಿಭಾಗದಡಿ ಪಶುಸಂಗೋಪಣೆ ಹೈನುಗಾರಿಕೆಯಲ್ಲಿ ತೊಡಗಿಸಿ ಕೊಂಡವರು ಬೀಡಿ ಕಟ್ಟುವವರು ಕಟ್ಟಡ ಕಾರ್ಮಿಕರು ಚರ್ಮೋತ್ಪನ್ನ ತಯಾರಕರನ್ನು ಮೂರನೇ ವಿಭಾಗದಲ್ಲಿ ಗುರುತಸಲಾಗಿದ್ದರೆ ನಾಲ್ಕನೇ ವಿಭಾಗದಲ್ಲಿ ಗಣಿ ಕಾರ್ಮಿಕರು ತರಕಾರಿ ಹಣ್ಣು ಮಾರಾಟಗಾರರು ಪತ್ರಿಕೆ ಹಾಕುವವರನ್ನು ಗುರುತಿಸಲಾಗಿದೆ.

ಕಾರ್ಮಿಕ ಸಂಘಟನೆಗಳು ದೇಶದಲ್ಲಿ ಸಾವಿರಕ್ಕೂ ಅಧಿಕ ಟ್ರೇಡ್ ಯೂನಿಯನ್‌ಗಳಿದ್ದು ಲಕ್ಷ ಕಾರ್ಮಿಕರನ್ನು ಪ್ರತಿನಿಧಿಸುತ್ತಿವೆ.ಕ್ಷೇತ್ರ ಪರಿಚಯದ ಸಂದರ್ಭದಲ್ಲಿ ದೊರಕಿದ ಮಾಹಿತಿಯ ಪ್ರಕಾರ ಹೆಚ್ಚಿನ ಕಟ್ಟಡ ಕಾರ್ಮಿಕರು ಈ ವಲಯದಲ್ಲೇ ಮುಂದುವರಿಯುತ್ತಾರೆ ಎಂದು ತಿಳಿದು ಬಂದಿರುತ್ತದೆ. ಕಟ್ಟಡ ಕಾರ್ಮಿಕರು ಈ ವಲಯದಲ್ಲೇ ಮಂದುವರಿಯಲು ಕಾರಣಗಳನ್ನು ಇಲ್ಲಿ ಚರ್ಚಿಸಲಾಗಿದೆ.

ರಾಷ್ಟ್ರೀಯ ಮಾದರಿ ಸಮೀಕ್ಷೆ ಸಂಸ್ಥೆಯ ೨೦೦೪–೨೦೦೫ ಇಸವಿಯಲ್ಲಿನ ದತ್ತಾಂಶಗಳ ಪ್ರಕಾರ ಸಂಘಟಿತ ಮತ್ತು ಅಸಂಘಟಿತ ವಲಯಗಳಲ್ಲಿ ಒಟ್ಟು ೪೯.೬ ಕೋಟಿ ಉದ್ಯೋಗಗಳು ಲಭ್ಯವಾಗಿದ್ದವು. ಅದರಲ್ಲಿ ೨.೬ ಕೋಟಿ ಉದ್ಯೋಗಗಳು ಸಂಘಟಿತ ವಲಯದಲ್ಲಿ ೪೩.೩ ಕೋಟಿ ಉದ್ಯೋಗಗಳು ಅಸಂಘಟಿತ ವಲಯದಲ್ಲಿ ಇದ್ದವು. ಕೃಷಿ ವಲಯದಲ್ಲಿ ೨೬.೮ ಕೋಟಿ ಕೆಲಸಗಾರರು ಇದ್ದರೆ ೨.೬ ಕೋಟಿ ಜನರು ಕಟ್ಟಡ ನಿರ್ಮಾಣದಲ್ಲಿ ತೊಡಗಿದ್ದು ಉಳಿದವರು ಉತ್ಪಾದನಾ ಕ್ಷೇತ್ರದಲ್ಲಿ ಕೆಲಸ ಮಾಡುವವರು.

ಅಸಂಘಟಿತ ಪುರುಷ ಕಟ್ಟಡ ಕಾರ್ಮಿಕರು ಅವಿಧ್ಯಾವಂತರಾಗಿದ್ದು ಅವರು ಮನೆಯನ್ನು ನೋಡಿಕೊಳ್ಳುವ ಜವಾಬ್ದಾರಿ ಬಂದಾಗ ದೂರ ಕೆಲಸಕ್ಕೆ ಹೋಗದೆ ತಾವು ವಾಸಿಸುವ ಸ್ಥಳದಲ್ಲೇ ಸಿಗುವಂತಹ ಕಡಿಮೆ ಕೂಲಿ ಹಾಗೂ ಕೌಶಲ್ಯದ ಋತುಮಾನಕ್ಕನುಗುಣವಾಗಿ ನಿರಂತರ ದುಡಿಮೆ ನಿರೀಕ್ಷಿಸದ ಕೆಲಸಗಳಲ್ಲಿ ತೊಡಗುತ್ತಾರೆ. ಇಲ್ಲಿ ಕಟ್ಟಡ ಕಾರ್ಮಿಕರು ವರ್ಷದಲ್ಲಿ ೧೦ ತಿಂಗಳು ನಿರಂತರವಾಗಿ ದುಡಿಯುತ್ತಾರೆ ಮಳೆಗಾಲದಲ್ಲಿ ಅವರಿಗೆ ಉದ್ಯೋಗಗಳೇ ಇರುವುದಿಲ್ಲ ಆದರೆ ಬೇರೆ ಕೌಶಲ್ಯಗಳು ಗೊತ್ತಿರುವುದರಿಂದ ಇವರಿಗೆ ತಮ್ಮ ಜೀವಮಾನವನ್ನು ಸಾಗಿಸಲು ನೆರವಾಗುತ್ತದೆ.

ದುಡಿಯುವ ಪುರುಷ ಕಾರ್ಮಿಕರ ವಯೋಮಿತಿಯನ್ನು ತೆಗೆದುಕೊಂಡರೆ ಸಾಮಾನ್ಯವಾಗಿ ಮಧ್ಯಮ ವಯಸ್ಸಿನ ವರ್ಗದವರು ಈ ವಲಯದಲ್ಲೇ ಮುಂದುವರಿಯಲು ಇಷ್ಟಪಡುತ್ತಾರೆ. ಏಕೆಂದರೆ ಮಧ್ಯಮ ವಯಸ್ಸಿನಲ್ಲಿ ಇವರು ಉದ್ಯೋಗವನ್ನು ಕಲಿತು ಅದರಲ್ಲಿ ಕೌಶಲ್ಯವನ್ನು ಹೊಂದಿರುತ್ತಾರೆ. ಇವರ ಆ ಕೌಶಲ್ಯದಿಂದ ಉದ್ಯೋಗಗಳು ಇವರನ್ನು ಹರಸಿಕೊಂಡು ಬರುತ್ತವೆ.

ಶಿಕ್ಷಣ, ತರಭೇತಿ ಮತ್ತು ಕೌಶಲ್ಯ ಇವುಗಳು ಈ ವಲಯಕ್ಕೆ ಪೂರಕವಾಗಿದೆ. ಕಟ್ಟಡ ಕಾರ್ಮಿಕರು ಹೆಚ್ಚಿನವರು ವಿಧ್ಯಾವಂತರಲ್ಲದಿದ್ದರೂ ಅನೇಕರು ಪ್ರಾಥಮಿಕ ಶಿಕ್ಷಣವನ್ನು ಪೂರ್ತಿಗೊಳಿಸಿರುತ್ತಾರೆ. ಯಾವುದೋ ಕಾರಣದಿಂದ ಹಣಕಾಸಿನ ಅಭಾವದಿಂದ ವಿಧ್ಯಾಭ್ಯಾಸವನ್ನು ಮುಂದುವರಿಸಲು ಸಾಧ್ಯವಾಗದೆ ತಮಗೆ ಗೊತ್ತಿರುವ ವಿಧ್ಯಾಭ್ಯಾಸದಿಂದ ನುರಿತ ಕೆಲಸಗಾರರ ಜೊತೆ ಕಲಿತು ತರಭೇತಿ ಪಡೆದು ಕೌಶಲ್ಯಸಹಿತ ಕೆಲಸಗಾರರಾಗಿ ರೂಪುಗೊಂಡು ತಮ್ಮ ಸಂಸಾರ ಹಾಗೂ ಜೀವನಚಕ್ರವನ್ನು ಸಾಗಿಸುತ್ತಿದ್ದಾರೆ.

ಸಂಘಟಿತ ವಲಯಗಳನ್ನು ಪ್ರವೇಶಿಸಲಾಗದೆ ಅಂದರೆ ಅಲ್ಲಿಯ ಕಡ್ಡಾಯ ಮತ್ತು ಅಪೇಕ್ಷಣೀಯ ಪೂರೈಕೆಗಳನ್ನು ಸಾಕ್ಷರತೆ ಕನಿಷ್ಟ ವಿಧ್ಯಾರ್ಹತೆ ಅನುಭವ, ಕಾರ್ಯಕ್ಷಮತೆ ಕೌಶಲ್ಯ ತರಭೇತಿಗಳನ್ನು ಪೂರೈಸಲಾಗದೆ, ಕಟ್ಟಡ ಕಾರ್ಮಿಕರು ಈ ಅಸಂಘಟಿತ ವಲಯಕ್ಕೆ ಬಂದಿದ್ದಾರೆ. ಏಕೆಂದರೆ ಸಂಘಟಿತ ವಲಯದಲ್ಲಿ ಅದು ತೆಗೆದುಕೊಳ್ಳುವ ದೀರ್ಘ ಸಮಯ, ಲಿಖಿತ ಪರೀಕ್ಷೆ, ಸಂದರ್ಶನ ಮತ್ತು ಇತರ ಪ್ರಕ್ರಿಯೆಗಳು. ಇವುಗಳೆಲ್ಲವೂ ಅಸಾಧ್ಯವಾದ ಕಾರಣ ತಮಗೆ ಇಷ್ಟವಾದ ವೃತ್ತಿಯಾದ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಆರಿಸಿಕೊಂಡು ಅದರಲ್ಲೇ ಮುಂದುವರಿಯುತ್ತಿದ್ದಾರೆ.

ಶ್ರಮದ ಪೂರೈಕೆ ಅಧಿಕವಾಗಿರುವುದರಿಂದ ಬೇಡಿಕೆ ಕಡಿಮೆಯಾಗುತ್ತದೆ. ಬೇಡಿಕೆ ಕಡಿಮೆಯಾದಾಗ ನಿರುದ್ಯೋಗದ ಸಮಸ್ಯೆಗಳು ಉಂಟಾಗುತ್ತದೆ. ಆದರೆ ಬೇಡಿಕೆ ಜಾಸ್ತಿಯಾಗಬೇಕಾದರೆ ಇವರು ತಮ್ಮ ಕೆಲಸದಲ್ಲಿ ತಮ್ಮನ್ನು ಪೂರ್ಣವಾಗಿ ತೊಡಗಿಸಿಕೊಂಡು ಉತ್ತಮ ಕೌಶಲ್ಯವನ್ನು ಹೊಂದಿ ನಿರುದ್ಯೋಗದ ಸಮಸ್ಯೆಯನ್ನು ಹೋಗಲಾಡಿಸಬಹುದು.

ತಂತ್ರಜ್ಞಾನದ ಬೆಳವಣಿಗೆ ಹಾಗೂ ಆಧುನೀಕರಣದ ಪ್ರಭಾವದಿಂದ ಅಸಂಘಟಿತ ಕಟ್ಟಡ ಕಾರ್ಮಿಕರು ಈ ವಲಯದಲ್ಲೇ ಮುಂದುವರಿದಿದ್ದಾರೆ. ಇವರಿಗೆ ಹೊಸ ತಂತ್ರಜ್ಞಾನಗಳ ಬಳಕೆ ಕಷ್ಟ ಸಾಧ್ಯ ಹಾಗೂ ಇವರು ಕೌಶಲ್ಯದಿಂದ ತಮ್ಮ ಈಗಿರುವ ಕೆಲಸದಲ್ಲೇ ಉತ್ತಮ ಸಂಭಾವಣೆಯನ್ನು ಪಡೆಯುತ್ತಿದ್ದಾರೆ ಹಾಗೂ ತಮಗೆ ಬೇಕಾದ ವ್ಯವಸ್ಥೆಗಳನ್ನು ತಮ್ಮ ಪರಿಶ್ರಮದಿಂದ ಅವರೇ ಮಾಡುತ್ತಿದ್ದಾರೆ. ತಂತ್ರಜ್ಞಾನ ಬೆಳೆಯುತ್ತಿರುವುದರಿಂದ ಕಟ್ಟಡ ಕಾರ್ಮಿಕರು ಈ ವಲಯದಲ್ಲೇ ಉಳಿದಿದ್ದಾರೆ.

ಯಾವುದೇ ಉತ್ಪಾದನಾಂಗಗಳನ್ನು ತೆಗೆದುಕೊಂಡರೂ ಅವು ಚದುರಿದಂತೆ ಇವೆ.ಇಂತಹ ಉತ್ಪದನಾಂಗಗಳಲ್ಲಿ ಕೆಲಸ ಮಾಡಬೇಕಾದರೆ ತುಂಬಾ ಕಷ್ಟ ಇದೆ. ಹಾಗೆಯೇ ಕಟ್ಟಡ ಕಾರ್ಮಿಕರು ತಮಗೆ ಇಷ್ಟವಾದ ಉದ್ಯೋಗದಲ್ಲೇ ಮುಂದುವರಿದು ಬೇರೆ ವಲಯದ ಕಡೆ ಗಮನ ಹರಿಸುವಂತೆ ಕಾಣುತ್ತಿಲ್ಲ. ಅವರು ಒಂದೇ ಉದ್ಯೋಗದಲ್ಲಿ ಕೌಶಲ್ಯವನ್ನು ಹೊಂದಿರುತ್ತಾರೆ. ಹೊಸದಾಗಿ ಉದ್ಯೋಗವನ್ನು ಕಲಿಯುವಾಗ ಯಾವುದೇ ಕಾರ್ಮಿಕರ ಗಳಿಕೆಯು ಕಡಿಮೆಯಾಗುತ್ತದೆ. ಹೀಗೆ ಗಳಿಕೆ ಕಡಿಮೆಯಾದಾಗ ಕಟ್ಟಡ ಕಾರ್ಮಿಕರು ತಮ್ಮ ಜೀವನವನ್ನು ಸಾಗಿಸಲು ಕಷ್ಟಪಡುತ್ತಾರೆ.

ಕಟ್ಟಡ ಕಾರ್ಮಿಕರಿಗೆ ಸರಕಾರದಿಂದ ಕೆಲವೊಂದು ಸವಲತ್ತುಗಳು ಸಿಗುತ್ತವೆ ಆದರೆ ಇವರು ವಿಧ್ಯಾವಂತರಲ್ಲದ ಕಾರಣ ಸಿಗುವ ಸೌಲಭ್ಯಗಳ ಬಗ್ಗೆ ಮಾಹಿತಿ ಕೊಡುವಂತಹ ಸರಿಯಾದ ವ್ಯಕ್ತಿಗಳು ಇರದೇ ಇರುವುದರಿಂದ ತಾನು ಆರಿಸಿಕೊಂಡ ವಲಯವನ್ನೇ ಮುಂದುವರಿಸುತ್ತಿದ್ದಾರೆ.

ಪ್ರತಿಯೊಬ್ಬ ಕಾರ್ಮಿಕನಿಗೂ ಕನಿಷ್ಟ ವೇತನ ನೀಡುವ ಬಗ್ಗೆ ಒಂದು ಕಾನೂನನ್ನು ರೂಪಿಸಲಾಗಿರುತ್ತದೆ. ಬಹುತೇಕ ಎಲ್ಲಾ ದೇಶಗಳಲ್ಲಿ ಕನಿಷ್ಟ ಕೂಲಿ ನಿಗದಿಯಾಗಿರುತ್ತದೆ, ಆದರೆ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಇದು ಪೂರ್ಣ ಪ್ರಮಾಣದಲ್ಲಿಲ್ಲ. ಇಲ್ಲಿ ಕನಿಷ್ಟ ವೇತನ ನಿಯಮವನ್ನು ಜಾರಿಗೊಳಿಸಿದರೆ ಕಾರ್ಮಿಕರು ಈ ವಲಯದಲ್ಲೇ ಮುಂದುವರಿಯುತ್ತಾರೆ.

ಕೈಗಾರಿಕಾ ಕ್ರಾಂತಿಯ ಮೊದಲು ಕೆಲಸದ ಅವಧಿಯು ೧೧ ರಿಂದ ೧೪ ಗಂಟೆಗಳ ವರೆಗೆ ಇತ್ತು. ಕೈಗಾರಿಕಾ ಪದ್ಧತಿ ಬೆಳೆದಂತೆ ಮತ್ತು ಯಂತ್ರಗಳ ಪರಿಚಯಿಸಿದಂತೆ ಅತಿ ಹೆಚ್ಚು ಕೆಲಸದ ಅವಧಿ ಸಾಮಾನ್ಯವಾಯಿತಾದರೂ ೧೪-೧೫ ಗಂಟೆಗಳ ಕೆಲಸದ ಅವಧಿ ಇತ್ತು. ಆದರೆ ಅಸಂಘಟಿತ ಕಾರ್ಮಿಕರಿಗೆ ದಿನಕ್ಕೆ ೮ ಗಂಟೆಗಳನ್ನು ರೂಪಿಸಿದರು ಇದರಿಂದ ಅವರಿಗೆ ಕೆಲಸದಲ್ಲಿ ಹಿಡಿತ ಸಿಕ್ಕಿತು ಮತ್ತು ದಿನಗೂಳಿ ಪಡೆಯಲು ಕಾರಣವಾಯಿತು. ಅದರ ನಂತರ

ಕೂಲಿ ನಿಗದಿಗೂ ಕ್ರಮ ಕೈಗೊಳ್ಳಲಾಯಿತು.ಕೆಲಸದ ವೇಳೆ ನಿಗಧಿಯಿಂದ ದಿನದಲ್ಲಿ ೮ಗಂಟೆ ಕೆಲಸ ಮಾಡಿ ಮತ್ತೆ ಉಳಿದ ಸಮಯವನ್ನು ಇನ್ನಿತರ ಕೆಲಸಕಾರ್ಯಗಳಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಯಿತು.

ಅಸಂಘಟಿತ ಕಾರ್ಮಿಕರು ಕೆಲಸ ಮಾಡುವಾಗ ಸುರಕ್ಷತೆಯ ದೃಷ್ಟಿಯಲ್ಲಿ ತಮ್ಮ ಕೆಲಸವನ್ನು ಅವಲಂಬಿಸಿದ್ದಾರೆ. ಹೀಗೆ ಕಾರ್ಮಿಕರ ಸುರಕ್ಷತೆ ಮತ್ತು ಆರೋಗ್ಯವನ್ನು ಗುರಿಯಾಗಿಟ್ಟುಕೊಂಡು ಕಾರ್ಮಿಕರು ಇದೇ ವಲಯವನ್ನು ಆಯ್ಕೆ ಮಾಡಿಕೊಂಡಿದ್ದಾರೆ.

ಯಾವುದೇ ಕೆಲಸವನ್ನು ತೆಗೆದುಕೊಂಡರೂ ಕೆಲಸಗಾರರ ವಿರುದ್ಧದ ಭೇದಭಾವವು ನೈತಿಕವಾಗಿ ಒಪ್ಪಲಾಗದ್ದು ಮತ್ತು ಕಾನೂನು ಬಾಹಿರವಾಗಿದೆ. ಇದಕ್ಕೆ ಪ್ರಮುಖಕಾರಣವೆಂದರೆ ಜನಾಂಗೀಯ ಭೇದಭಾವ ಅಥವಾ ಲಿಂಗ ಭೇದಭಾವ ಇತ್ಯಾದಿಗಳಿವೆ.ಆದರೆ ಕಟ್ಟಡ ಕಾರ್ಮಿಕರು ಯಾವುದೇ ಭೇದಭಾವವಿಲ್ಲದೆ ಎಲ್ಲರನ್ನೂ ಸಮಾನ ರೀತಿಯಿಂದ ಕಾಣುತ್ತಾ ಕೆಲಸವನ್ನು ಮಾಡುತ್ತಿದ್ದಾರೆ. ಹೀಗೆ ಯಾವುದೇ ಜಾತಿ ಮತ ಇಲ್ಲದೆ ಕೆಲಸ ಮಾಡುತ್ತಿದ್ದಾರೆ.

ಬಾಲ ಕಾರ್ಮಿಕ ಎಂದರೆ ಕಾನೂನು ಅಥವಾ ಅಧಿನಿಯಮ ವಿಧಿಸಿದ ವಯೋಮಾನಕ್ಕಿಂತ ಕಡಿಮೆಯಾದವರನ್ನು ಉದ್ಯೋಗಕ್ಕೆ ನೇಮಿಸಿಕೊಳ್ಳುವುದು. ಬಾಲ ಕಾರ್ಮಿಕ ಪದ್ದತಿಯು ಇಡೀ ಇತಿಹಾಸದುದ್ದಕ್ಕೂ ಒಂದು ಸಮಸ್ಯೆಯಾಗಿರಲಿಲ್ಲ. ಅಸಂಘಟಿತ ವಲಯದ ಕಾರ್ಮಿಕರು ತಾವು ಎಷ್ಟೇ ಕೌಶಲ್ಯವುಳ್ಳವರಾಗಿದ್ದರೂ ಬಾಲ ಕಾರ್ಮಿಕರ ನಿರ್ಮೂಲನೆಗೆ ಪಣತೊಟ್ಟು ಯಾವುದೇ ಮಕ್ಕಳಿಗೆ ಉದ್ಯೋಗ ಅವಕಾಶವನ್ನು ಕೊಡದೆ ಈ ವಲಯದಲ್ಲಿ ಮುಂದುವರಿಯುತ್ತಿದ್ದಾರೆ.

ಕಾರ್ಮಿಕರಿಗೆ ಕೆಲಸದಲ್ಲಿ ಆಸಕ್ತಿ ಬರಬೇಕಾದರೆ ಕಾಮಿಕರು ಕೆಲಸ ಮಾಡುವ ಜಾಗವು ಸ್ವಸ್ಥ ಮತ್ತು ಶಿಸ್ತಿನಿಂದ ಇರಬೇಕು. ಮಾಲಿಕರು ಕೆಲಸಗಾರರನ್ನು ಸಂಪರ್ಕಿಸಿ ಅವರ ಅಭಿಪ್ರಾಯ ಕೇಳಬೇಕೆಂಬ ನಿಯಮವೂ ಕೆಲವೆಡೆ ಇದೆ. ಕೈಗಾರಿಕರಣದ ಪ್ರಜಾಪ್ರಭುತ್ವ ಪದ್ಧತಿಯು ಇದೇ ಅಭಿಪ್ರಾಯ ಹೊಂದಿದೆ, ಆದರೆ ಇದು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿದೆ. ಕೆಲಸಗಾರರ ಅಹವಾಲುಗಳನ್ನು ಕೇಳುವುದಷ್ಟೇ ಅಲ್ಲ ಅದನ್ನು ಅವರ ಮತಾಭಿಪ್ರಾಯದ ಮೂಲಕವೂ ಗ್ರಹಿಸಬೇಕಾಗಿದೆ. ಕೆಲಸ ಮಾಡುವ ವಾತಾವರಣ ಉತ್ತಮವಿದ್ದಾಗ ಕೆಲಸವನ್ನು ಸರಾಗವಾಗಿ ಮಾಡಿ ಮುಗಿಸಬಹುದು.

## ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗ

ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗವನ್ನು ರವೀಂದ್ರವರ್ಮ ಅವರ ಅಧ್ಯಕ್ಷತೆಯ ಜಾಗತೀಕರಣ ಹಾಗೂ ವ್ಯಾಪಾರ ಮತ್ತು ಕೈಗಾರಿಕೆಯ ಉದಾರೀಕರಣದಿಂದ ಉದ್ಭವವಾದ ಹೊಸ ವಾತಾವರಣವನ್ನು ಪರಿಶೀಲಿಸಬೇಕೆಂದು ಆಶಿಸಲಾಯಿತು.

ಪ್ರಸ್ತಾವಣೆಯ ಷರತ್ತುಗಳು

ಎನ್.ಸಿ.ಎಲ್.ನ ಪ್ರಸ್ತಾವಣೆಯ ಷರತ್ತುಗಳು ಈ ಮುಂದಿನಂತಿವೆ.

*ಅಸಂಗಘಟಿತ ವಲಯದ ಕಾರ್ಮಿಕರಿಗೆ ಕನಿಷ್ಟ ಮಟ್ಟದರಕ್ಷಣೆಯನ್ನು ನೀಡಲು ಒಂದು ರಕ್ಷಣಾ ಕಾನೂನನ್ನು ಸಲಹೆ ಮಾಡುವುದು,ಮತ್ತು

*ಅದು ತನ್ನ ಶಿಫಾರಸುಗಳ ಚೌಕಟ್ಟನ್ನು ಅಭಿವೃದ್ಧಿಸುವ ವೇಳೆಯಲ್ಲಿ ಕನಿಷ್ಟ ಮಟ್ಟದ ಕಾರ್ಮಿಕ ರಕ್ಷಣೆ ಮತ್ತು ಕ್ಷೇಮಾಭ್ಯುದಯದ ಕ್ರಮಗಳು ಹಾಗೂ ಅವುಗಳ ಕಾರ್ಯಗತಕ್ಕೆ ಒಂದು ಮೂಲ ಸಾಂಸ್ಥಿಕ ಚೌಕಟ್ಟನ್ನು ಒದಗಿಸುವತ್ತ ಗಮನಹರಿಸುವಂತೆ ಆಶಿಸಲಾಯಿತು.

ಪ್ರಮುಖ ಶಿಫಾರಸುಗಳು

ಆಯೋಗವು ತನ್ನ ಅಂತಿಮ ವರದಿಯನ್ನು ೨೦೦೨ ಜೂನ್ ೨೯ ರಂದು ಸಲ್ಲಿಸಿತು ಅದರ ಪ್ರಮುಖ ಶಿಫಾರಸುಗಳು ಈ ಮುಂದಿನಂತಿವೆ.

೧. ಕಾರ್ಮಿಕರನ್ನು ಕೆಲಸದಿಂದ ವಜಾಗೊಳಿಸುವುದಕ್ಕೆ ತೆಗೆದು ಹಾಕುವುದಕ್ಕೆ ಯಾವುದೇ ಪೂರ್ವಾನುಮತಿ ಅಗತ್ಯವಿಲ್ಲ.

೨. ಯಾವುದೇ ವೇತನ ಮಂಡಳಿಯ ಅಗತ್ಯವಿಲ್ಲ.

೩. ರಜಾದಿನಗಳ ಸಂಖ್ಯೆಯನ್ನು ವರ್ಷಕ್ಕೆ ಐದು ದಿನಗಳಿಗೆ ಮತ್ತು ನಿರ್ಬಂಧಿತ ರಜೆಯನ್ನು ೧೦ ದಿನಗಳಿಗೆ ಸೀಮಿತಗೊಳಿಸಬೇಕು.

೪. ಮುಖ್ಯ ಉತ್ಪಾದನೆ ಅಥವಾ ಸೇವೆಗಳಲ್ಲಿ ಗುತ್ತಿಗೆ ಕ್ರಮ ಇರಬಾರದು.

೫. ೨೦ ಕ್ಕಿಂತ ಅಧಿಕ ಜನರನ್ನು ನೇಮಿಸಿಕೊಳ್ಳುವ ಸಂಘಟನೆಗಳಲ್ಲಿ ಒಂದು ದೂರು ಪರಿಶೀಲನನಾ ಸಮಿತಿಯನ್ನು ರಚಿಸಬೇಕು.

೬. ಪ್ರಧಾನ ಮಂತ್ರಿಗಳ ಅಧ್ಯಕ್ಷತೆಯಲ್ಲಿ ಒಂದು ಉನ್ನತ ಅಧಿಕಾರದ ರಾಷ್ಟ್ರೀಯ ಸಾಮಾಜಿಕ ಭದ್ರತಾ ಪ್ರಾಧಿಕಾರದ ಸೃಷ್ಟಿ ಮತ್ತು

೭. ಉದ್ಯೋಗ ಸೃಷ್ಟಿ ಮತ್ತು ರಕ್ಷಣೆಗಾಗಿ ಅಸಂಘಟಿತ ವಲಯದ ಕಾರ್ಮಿಕರಿಗೆ ಒಂದು ಕಾನೂನನ್ನು ರಚಿಸುವುದು.

ಅದು ಎಲ್ಲಾ ಕಾರ್ಮಿಕ ಕಾನೂನುಗಳನ್ನು ನ್ಯಾಯಯುತವಾಗಿ ಒಗ್ಗೂಡಿಸಿ ಕಾರ್ಮಿಕ ಮಾಲಿಕ ಸಂಬಂಧ ಕಾನೂನು ಅಥವಾ ಕಾರ್ಮಿಕ ಮಾಲಿಕ ಸಂಬಂಧದ ಕಾನೂನು ಎಂಬ ಒಂದೇ ಕಾನೂನನ್ನು ಜಾರಿಗೊಳಿಸಲು ಸಲಹೆ ನೀಡಿದೆ. ಆಡಳಿತದಲ್ಲಿ ಕಾರ್ಮಿಕರ ಪಾಲ್ಗೊಳ್ಳುವಿಕೆಯ ಕುರಿತು ಅದು ಒಂದು ಕಾನೂನು ರೀತಿಯ ಯೋಜನೆ ರುಪಿಸಲು ಶಿಫಾರಸು ಮಾಡಿದೆ.

ಕನಿಷ್ಟ ಕೂಲಿ ನಿರ್ಧಾರದ ಕುರಿತು ಆಯೋಗವು ಯಾವುದೇ ಉದ್ಯೋಗದಲ್ಲಿ ಕೊಡಲಾಗುವ ಕನಿಷ್ಟ ವೇತನವು ಕಾರ್ಮಿಕ ಮತ್ತು ಅವನ ಕುಟುಂಬದ ಅಗತ್ಯಗಳನ್ನು ಪೂರೈಸುವಂತಿರಬೇಕು ಎಂದು ಹೇಳಿದೆ.ಅದು ಕೆಲಸದ ಅವಧಿ, ರಜಾ ಸೌಲಭ್ಯ ಮತ್ತು ಕೆಲಸದ ಸ್ಥಳಗಳಲ್ಲಿನ ಕೆಲಸದ ಸ್ಥಳಗಳಲ್ಲಿನ ಕೆಲಸದ ಸ್ಥಿತಿಗತಿಗಳ ಬಗ್ಗೆ ಒಂದು ಸಾಮಾನ್ಯ ನಿಯಮವನ್ನು ರೂಪಿಸಲು ಕರೆ ನೀಡಿದೆ. ಅದಲ್ಲದೆ ಅಸಂಘಟಿತ ಕಾರ್ಮಿಕರ ಸಂಘ ರಚನೆ ಮತ್ತು ಅದರ ನೋಂದಾವಣೆಗೆ ಅನುಕೂಲವಾಗುವ ರೀತಿಯಲ್ಲಿ ಕಾರ್ಮಿಕ ಸಂಘಟನೆ ಕಾನೂನಿಗೆ ತಿದ್ದುಪಡಿ ತರಬೇಕು ಎಂದಿದೆ.ವೈಯಕ್ತಿಕ ಸಮಸ್ಯೆಗಳು, ದೂರುಗಳು ಮತ್ತು ಕಷ್ಟ ಕಾರ್ಪಣ್ಯಗಳ ಪರಿಗಣನೆಗೆ ಉದ್ಯೋಗ ಅದಾಲತ್, ಕಾರ್ಮಿಕ ನ್ಯಾಯಾಲಯ ಮತ್ತು ಕಾರ್ಮಿಕ ಸಂಬಂಧಗಳ ಆಯೋಗ ಎಂಬ ಮೂರು ಸುತ್ತಿನ ವ್ಯವಸ್ಥೆಯ ಸೃಷ್ಟಿಗೆ ಆಯೋಗ ಶಿಫಾರಸು ಮಾಡಿದೆ.

ಎರಡನೇ ಕಾರ್ಮಿಕ ಆಯೋಗದ ಬಗ್ಗೆ ಕಂಡುಕೊಂಡಂತೆ ಕಟ್ಟಡ ಕಾರ್ಮಿಕರಿಗೆ ಕಾರ್ಮಿಕ ಕಾಯಿದೆ ಇದರ ಬಗ್ಗೆ ಅರಿವೇ ಇರಲಿಲ್ಲ. ಹಾಗೂ ಈ ಕಾಯಿದೆ ಇದೆ ಎಂದು ಕೂಡಾ ಗೊತ್ತುರಲಿಲ್ಲ ,ಯಾಕೆಂದರೆ ಅವರಿಗೆ ಇರುವ ಮಾಹಿತಿಯ ಕೊರತೆ ಮತ್ತು ಅದರ ಬಗ್ಗೆ ಶಿಕ್ಷಣ ಇಲ್ಲದಿರುವುದು.

ಅಸಂಘಟಿತ ಕಾರ್ಮಿಕರು ಇದೇ ವಲಯದಲ್ಲಿ ಮುಂದುವರಿಯಲಿರುವ ಕಾರಣಗಳನ್ನು ತಿಳಿದುಕೊಂಡ ನಂತರ ಮುಂದಿನ ಅಧ್ಯಾಯದಲ್ಲಿ ಅಧ್ಯಯನದ ಫಲಿತ ಮತ್ತು ಅವಲೋಕನಗಳ ಆಧಾರದ ಮೇಲೆ ಮರುಷ ಕಾರ್ಮಿಕರ ಅಭಿವೃದ್ದಿಗೆ ಸಲಹೆ ಮತ್ತು ಉಪಸಂಹಾರವನ್ನು ನೀಡಲಾಗುವುದು.

# ಸಲಹೆ ಸೂಚನೆಗಳು ಮತ್ತು ಸಂಹಾರ

ಹಿಂದಿನ ಎಲ್ಲಾ ಅಧ್ಯಾಯದಲ್ಲಿ ಅಧ್ಯಯನಗಳನ್ನು ಗಮನಿಸಿದಾಗ ಅಧ್ಯಯನದ ಫಲಿತಗಳು ಮತ್ತು ಅದರ ಅಭಿವೃದ್ಧಿಗೆ ಬೇಕಾಗುವ ಸಲಹೆ ಸೂಚನೆಗಳು ಹಾಗೂ ಉಪಸಂಹಾರವನ್ನು ಈ ಅಧ್ಯಾಯದಲ್ಲಿ ನೀಡಲಾಗುವುದು.

ಶಿಕ್ಷಣ ,ವಯಸ್ಸು ,ಜಾತಿ ,ಸಿಗುವಂತಹ ಸೌಲಭ್ಯಗಳು ಈ ಅಧ್ಯಯನವು ಕಂಡುಕೊಂಂಡಂತಹ ಕೆಲವು ಫಲಿತಗಳಾಗಿವೆ.

ಹೆಚ್ಚಿನ ಕಾರ್ಮಿಕರು ಪ್ರಾಥಮಿಕ ಶಿಕ್ಷಣವನ್ನು ಪೂರ್ತಿ ಗೊಳಿಸಿರುತ್ತಾರೆ ಅದರಲ್ಲಿ ೬೪ ಶೇಕಡಾ ,ಪ್ರೌಢ ಶಿಕ್ಷಣವನ್ನು ೨೮ ಶೇಕಡಾ ,ಪದವಿಪೂರ್ವ ಶಿಕ್ಷಣವನ್ನು ೮ ಶೇಕಡಾ ಕಾರ್ಮಿಕರು ಪೂರ್ತಿಗೊಳಿಸಿರುತ್ತಾರೆ. ಶಿಕ್ಷವನ್ನು ಗಣನೆಗೆ ತೆಗೆದುಕೊಂಡಾಗ ಕಾರ್ಮಿಕರೆಲ್ಲರೂ ಪ್ರಾಥಮಿಕ ಶಿಕ್ಷಣವನ್ನು ಪೂರ್ತಿಗೊಳಿಸಿರುತ್ತಾರೆ. ಕಾರ್ಮಿಕರ ವಯೋಮಾನದಂತೆ ೧೪-೧೮ ವರ್ಷದ ಒಳಗಿನವರು ಹಾಗೂ ೧೯-೨೦ ವಯೋಮಾನದವರು ಕ್ರಮವಾಗಿ ಶೇಕಡಾ ೪ ರಷ್ಟು ಇದ್ದರೆ, ೩೦-೪೦ ವಯೋಮಾನದವರು ಶೇಕಡಾ ೪೦ ರಷ್ಟು ಇದ್ದು ಹಾಗೂ ೩೦-೪೦ ರಷ್ಟು ವಯೋಮಾನದವರು ಶೇಕಡಾ ೩೬ ರಷ್ಟು ಇದ್ದಾರೆ. ಇದರಿಂದ ತಿಳಿಯುವುದೇನೆಂದರೆ ಕಾರ್ಮಿಕರಲ್ಲಿ ಹೆಚ್ಚಿನವರು ೨೦-೩೦ ವರ್ಷದವರಾಗಿದ್ದು ಇವರು ಕೌಶಲ್ಯಕ್ಕಾಗಿ ತಮ್ಮ ವೃತ್ತಿಯನ್ನು ಆರಿಸಿಕೊಂಡಿದ್ದಾರೆ. ಕಾರ್ಮಿಕರ ಜಾತಿಯನ್ನು ಅವಲೋಕಿಸಿದಾಗ ಹಿಮದುಳಿದ ವರ್ಗದವರು ಶೇಕಡಾ ೭೬ ಇದ್ದು ಪರಿಶಿಷ್ಟ ಜಾತಿ ,ಪರಿಶಿಷ್ಟ ಪಂಗಡ ಹಾಗೂ ಅಲ್ಪಸಂಖ್ಯಾತರು ಕ್ರಮವಾಗಿ ಶೇಕಡಾ ೮ ರಷ್ಟು ಇರುತ್ತಾರೆ. ಇದರಿಂದ ತಿಳಿಯುವುದೇನೆಂದರೆ ಹೆಚ್ಚಿನ ಕಾರ್ಮಿಕರೆಲ್ಲರೂ ಹಿಂದಿಳಿದ ವರ್ಗಕ್ಕೆ ಸೇರಿದವರಾಗಿದ್ದಾರೆ. ಕಾರ್ಮಿಕರ ಸೌಲಭ್ಯಗಳು ಅಧಿಕವಾಗಿದ್ದು ಯಾವುದೇ ಕಾರ್ಮಿಕರಿಗೆ ಅದರ ಅರಿವು ಇಲ್ಲದಿರುವುದರಿಂದ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ ಎಂದು ತಿಳಿದು ಬಂದಿರುತ್ತದೆ. ಶಿಕ್ಷಣ,ವಯಸ್ಸು ,ಜಾತಿ ಹಾಗೂ ಸೌಲಭ್ಯಗಳು ಅಧ್ಯಯನದಲ್ಲಿ ಕಂಡುಕೊಂಡಂತೆ ಒಂದಕ್ಕೊಂದು ಪೂರಕವಾಗಿವೆ. ವಿಧ್ಯಾಭ್ಯಾಸದ ಪ್ರಮಾಣದಲ್ಲಿ ಹೆಚ್ಚಾಗಿ ಪ್ರಾಥಮಿಕ ಮಟ್ಟದಲ್ಲೇ ಇದೆ,ವಯಸ್ಸಿನಲ್ಲಿ ಕೂಡಾ ಮಧ್ಯಮ ವರ್ಗಕ್ಕೆ ಸೇರಿದವರಾಗಿರುತ್ತಾರೆ,ಹಾಗೂ ಹೆಚ್ಚಿನವರೆಲ್ಲರೂ ಹಿಂದುಳಿದ ವರ್ಗಕ್ಕೆ ಸೇರಿದವರಾಗಿದ್ದಾರೆ. ಇದರಿಂದ ತಿಳಿಯಬಹುದೇನೆಂದರೆ ಶಿಕ್ಷಣ ,ಜಾತಿ ,ವಯಸ್ಸು ಹಾಗೂ ಸೌಲಭ್ಯಗಳು ಒಮದಕ್ಕೊಂದು ಸಂಬಂಧವನ್ನು ಹೊಂದಿವೆ ಎಂದು ತಿಳಿಯಬಹುದು.

ಅಧ್ಯಯನದ ಆಧಾರದ ಸಾರಾಂಶ ಮತ್ತು ಫಲಿತಾಂಶಗಳನ್ನು ಕೊನೆಯಲ್ಲಿ ನೀಡಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಗ್ರಂಥಗಳು ಲೇಖನಗಳು, ವರದಿ ಮತ್ತು ವಿಮರ್ಶೆಯ ಮೂಲಕ ವಿಶ್ಲೇಷಣೆ ಮಾಡಿ ಮಾಹಿತಿ ಸಂಗ್ರಹಣೆ ಮಾಡುವುದರ ಜೊತೆಗೆ ಕ್ಷೇತ್ರಾಧಾರಿತ ಅಧ್ಯಯನವನ್ನು ಮಾಡಲಾಗಿದೆ. ಈ ದೇಶವು ಮುಂದುವರಿಯುತ್ತಾ ಬರುವ ಹಾಗೆ ನಾವು ನಮ್ಮ ಚಿಂತನೆ ಯೋಚನೆಗಳಲ್ಲಿ ಬದಲಾವಣೆಗಳನ್ನು ತಂದುಕೊಳ್ಳಬೇಕು. ಪುರುಷ ಕಟ್ಟಡ ಕಾರ್ಮಿಕರು ತಮ್ಮ ವೃತ್ತಿಗೆ ಪೂರಕವಾದ ವಿವಿಧ ಸವಲತ್ತುಗಳಿಂದ ವಂಚಿತರಾಗಿದ್ದಾರೆ. ಇಂದಿನ ಬೆಲೆ ಏರಿಕೆಯ ದಿನಗಳಲ್ಲಿ ಜೀವನ

ಸಾಗಿಸುವುದೇ ಕಷ್ಟವಾಗುತ್ತಿದೆ ಬರುವ ಅಲ್ಪ ವರಮಾನದಲ್ಲಿಯೇ ಮಕ್ಕಳಿಗೆ ಶಿಕ್ಷಣ ಕೊಡಿಸಲು ಸಾಧ್ಯವಾಗದಂತಿದೆ. ಸರಕಾರದ ಇಚ್ಛಾಶಕ್ತಿಯ ಕೊರತೆಯಿಂದ ಇಂದಿಗೂ ಕೂಡಾ ಕೋಟ್ಯಾಂತರ ಜನ ಮೂಲಭೂತ ಸೌಲಭ್ಯ ವಂಚಿತರಾಗಿದ್ದಾರೆ. ದೇಶದ ಸಂಪತ್ತನ್ನು ಬೆಳೆಸುವ, ದುಡಿಯುವ ವರ್ಗದ ಜನ ಅದರ ಲಾಭದಲ್ಲಿ ಪಾಲುದಾರರಾಗುತ್ತಿಲ್ಲ.

ಈಚೆಗಷ್ಟೆ ಅಸಂಘಟಿತ ವಲಯದ ಕಾರ್ಮಿಕರ ಕಲ್ಯಾಣ ಕಾರ್ಮಿಕರ ಕಲ್ಯಾಣ ಮಂಡಳಿ ಜಾರಿಗೆ ಬಂದಿದ್ದು ಅದು ಅಂಬೆಗಾಲಿಡುತ್ತಿದೆ. ಅಸಂಘಟಿತ ವಲಯದ ಕಾರ್ಮಿಕರಿಗೆ ಸೌಲಭ್ಯ ಕಲ್ಪಿಸುವ ಮೂಲಕ ಸಾಮಾಜಿಕ ಭದ್ರತೆ ಕಲ್ಪಿಸಿ ಕೊಡಬೇಕಾಗಿದೆ. ಪುರುಷ ಕಟ್ಟಡ ಕಾರ್ಮಿಕರ ಸಮಸ್ಯೆಗಳನ್ನು ಹೋಗಲಾಡಿಸಲು ಸರಕಾರವು ಹಲವಾರು ಕಾರ್ಯಕ್ರಮಗಳನ್ನು ರೂಪಿಸಿದ್ದರೂ ಈ ಕಾರ್ಯಕ್ರಮಗಳು ಎಲ್ಲರನ್ನೂತಲುಪುತ್ತಿಲ್ಲ. ಕಟ್ಟಡ ಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯು ಇನ್ನೂ ಹಿಂದುಳಿದಿದೆ ಎನ್ನುವುದು ಅಧ್ಯಯನದ ಊಹೆಯಾಗಿದ್ದರೂ ಕ್ಷೇತ್ರಕಾರ್ಯದ ಸಮಯದಲ್ಲಿ ಪುರುಷ ಕಾರ್ಮಿಕರು ತಮ್ಮ ಸಾಮಾಜಿಕ ಆರ್ಥಿಕ ಸ್ಥಿತಿ ಉತ್ತಮವಾಗಿದೆ ಎಂದು ತಿಳಿಸಿರುತ್ತಾರೆ.

ಆದರೆ ಮಾಹಿತಿದಾರರು ತಮ್ಮ ಆರ್ಥಿಕ, ಸಾಮಾಜಿಕ ಪರಿಸ್ಥಿತಿ ಉತ್ತಮವಾಗಿರಲು ಸರಕಾರದಿಂದ ಯಾವುದೇ ರೀತಿಯ ಸಾಲ ಸೌಲಭ್ಯಗಳು ದೊರಕುತ್ತಿಲ್ಲ ಎಂದು ತಿಳಿಸಿರುತ್ತಾರೆ.ಇದರಿಂದ ನಾವು ತಿಳಿಯಬಹುದು ಅವರು ತಮಗೆ ಆಗುತ್ತಿರುವ ಕಷ್ಟಗಳನ್ನು ತಿಳಿಸಲು ಬಯಸುತ್ತಿಲ್ಲ, ಆದರೆ ಅವರ ಸ್ಥಿತಿ ಉತ್ತಮಗೊಳ್ಳಬೇಕು ಎಂಬ ಆಸೆ ಅವರನ್ನು ಕಾಡುತ್ತಾ ಇದೆ .

ಹಂತ ಹಂತದಲ್ಲಿ ಪ್ರತಿಯೊಂದು ರೀತಿಯ ಕಷ್ಟಗಳನ್ನು ಪುರುಷ ಕಾರ್ಮಿಕರು ಕೆಲಸ ಮಾಡುವಾಗ ಅನುಭವಿಸುತ್ತಿದ್ದಾರೆ ಎನ್ನುವುದು ಈ ಅಧ್ಯಯನದಿಂದ ತಿಳಿದುಬಂದಿರುವ ವಿಷಯವಾಗಿದೆ. ಕಟ್ಟಡ ಕಾರ್ಮಿಕರು ಹೆಚ್ಚಿನವರು ಪದವಿ ವ್ಯಾಸಂಗ ಮಾಡದಿದ್ದರೂ ಸ್ವಲ್ಪ ಮಟ್ಟಿಗೆ ವಿಧ್ಯಾವಂತರಾಗುದ್ದಾರೆ. ಹೆಚ್ಚಿನ ಪುರುಷ ಕಾರ್ಮಿಕರು ಕಡಿಮೆ ಮತ್ತು ಹೆಚ್ಚು ಶಿಕ್ಷಣವನ್ನು ಪಡೆದವರಾಗಿದ್ದಾರೆ ಎಂಬುದು ಕ್ಷೇತ್ರ ಕಾರ್ಯದ ಅಂಕಿ ಅಂಶಗಳ ಆಧಾರದಲ್ಲಿ ತಿಳಿದುಬಂದಿದೆ . ಕಟ್ಟಡ ಕಾರ್ಮಿಕರಿಗೆ ಬೇರೆಯಾವುದೇ ಕೆಲಸ ಸಿಗದಿರುವುದರಿಂದ ಹಾಗೂ ಬೇರೆ ಎಲ್ಲಾ ಕೆಲಸಗಳಲ್ಲಿಯೂ ಕಡಿಮೆ ಸಂಬಳ ಇರುವುದರಿಂದ ಈ ಕೆಲಸವನ್ನು ಮಾಡುತ್ತಿದ್ದಾರೆ. ಒಟ್ಟಿನಲ್ಲಿ ಅವರ ವಿಧ್ಯಾಭ್ಯಾಸಕ್ಕೂ ಅವರ ದುಡಿಮೆಗೂ ಸಂಬಂಧ ಇಲ್ಲದಂತಾಗಿದೆ.

ಕಟ್ಟಡ ಕಾರ್ಮಿಕರು ಹೆಚ್ಚಿನ ಆದಾಯಕ್ಕಾಗಿ ಹೆಚ್ಚು ಸಮಯ ದುಡಿಯಬೇಕಾಗುತ್ತದೆ. ಹೀಗೆ ಹೆಚ್ಚು ದುಡಿಯುವುದರಿಂದ ದೈಹಿಕ ತೊಂದರೆ ಹಾಗೂ ಸಮಸ್ಯೆಗಳು ಕಾಣಿಸಿಕೊಳ್ಳುತ್ತದೆ ಅಲ್ಲದೆ ಇನ್ನೂ ಅನೇಕ ತರದ ಕಷ್ಟಗಳನ್ನು ಎದುರಿಸಬೇಕಾಗುತ್ತದೆ. ಇವರ ನೋವುಗಳಿಗೆ ಸ್ಪಂದಿಸಿ ಈ ತೊಂದರೆಗಳಿಂದ ಪಾರುಮಾಡಲು ಸರಕಾರ ಮತ್ತು ಸಂಘಸಂಸ್ಥೆಗಳು ಹಲವಾರು ನೀತಿ ನಿಯಮ ಕಾನೂನುಗಳನ್ನು ಜಾರಿಗೊಳಿಸಿ ಮುಂದೆ ಬಂದಿರುವುದು ಶ್ಲಾಘನೀಯ.

## ಸಾರಾಂಶ

ಈ ಅಧ್ಯಯನದ ಸಮಾಪ್ತಿಯಲ್ಲಿ ತಿಳಿಯುವುದೇನೆಂದರೆ ಅಸಂಘಟಿತ ವಲಯದ ಕಾರ್ಮಿಕರ ತೊಂದರೆಗಳನ್ನು ವಿವರಿಸುವುದು ಬಹಲ ಕಷ್ಟ ಏಕೆಂದರೆ ಅವರು ಅನುಭವಿಸುತ್ತಿರುವ ಶೋಷಣೆಗಳನ್ನು ವಿವರಿಸಿದಷ್ಟು ಮುಗಿಯದು.ಅಸಂಘಟಿತ ವಲಯದ ಲಕ್ಷಣಗಳೇನೆಂದರೆ ಕಡಿಮೆ ಕೂಲಿ, ಕಡಿಮೆ ಆದಾಯ,ಅಧಿಕ ಕೆಲಸಗಾರರು.ಪೆರ್ನೆ ಗ್ರಾಮದಲ್ಲಿರುವ ಕಟ್ಟಡ ಕಾರ್ಮಿಕರು ಹೆಚ್ಚಾಗಿ ಬಡವಾಗಿದ್ದು ಉದ್ಯೋಗದ ವಿಚಾರದಲ್ಲಿ ಬೇರೆ ಬೇರೆ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾರೆ ಎನ್ನುವುದನ್ನು ಗಮನದಲ್ಲಿ ಇರಿಸಿಕೊಂಡು ಈ ಅಧ್ಯಯನವನ್ನು ಮಾಡಲಾಗಿದೆ.

ಈ ಅಧ್ಯಯನದಲ್ಲಿ ಅಸಂಘಟಿತ ಕಟ್ಟಡ ಕಾರ್ಮಿಕರ ಸ್ಥಿತಿಗತಿ, ಅವರ ವೇತನ ಅವರು ಅನುಭವಿಸುತ್ತಿರುವ ತೊಂದರೆಗಳು,ಅದಕ್ಕಾಗಿ ಸರಕಾರ ತೆಗೆದುಕೊಂಡಿರುವ ಕ್ರಮಗಳನ್ನು ವಿವರಿಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಸಂಘಟಿತ ಮತ್ತು ಅಸಂಘಟಿತ ವಲಯದ ಪರಿಚಯಿಸಿ ಅಸಂಘಟಿತ ವಲಯದ ಕಾರ್ಯಕ್ಷೇತ್ರಗಳು, ಅಧ್ಯಯನದ ಉದ್ದೇಶಗಳು, ವ್ಯಾಪ್ತಿ, ಮಹತ್ವ, ಅಧ್ಯಯನದ ಪ್ರದೇಶದ ಪರಿಚಯವನ್ನು ನೀಡಲಾಗಿದೆ. ಯಾವ ಉದ್ದೇಶಗಳನ್ನು ಮುಂದಿಟ್ಟುಕೊಂಡು ಅಧ್ಯಯನವನ್ನು ಮಾಡಲಾಗಿದೆ.ಅಧ್ಯಯನವು ಯಾಕೆ ಮಹತ್ವಪೂರ್ಣವಾಗಿದೆ. ವ್ಯಾಪ್ತಿಯಲ್ಲಿ ಯಾವೆಲ್ಲಾ ಪರಿಕಲ್ಪನೆಗಳನ್ನು ಬಳಸಿಕೊಳ್ಳಲಾಗಿದೆ ಎಂದು ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಪೆರ್ನೆ ಗ್ರಾಮದ ಕ್ಷೇತ್ರ ಪರಿಚಯವನ್ನು ಮಾಡಲಾಗಿದೆ,ಅದರಲ್ಲಿ ಪೆರ್ನೆ ಗ್ರಾಮದ ವ್ಯಾಪ್ತಿ,ವಿಸ್ತೀರ್ಣ,ಒಟ್ಟು ಜನಸಂಖ್ಯೆ,ಗ್ರಾಮಪಂಚಾಯತಿಯಿಂದ ಅಸಂಘಟಿತ ಕಾರ್ಮಿಕರಿಗೆ ಸಿಗುವ ಸೌಲಭ್ಯಗಳು,ಉದ್ಯೋಗ ಖಾತರಿ ಯೋಜನೆ ,ಬಸವಸತಿ ಯೋಜನೆ,ಗ್ರಾಮ ಪಂಚಾಯತಿನ ಕಾರ್ಯಗಳು,ಸದಸ್ಯರುಗಳು,ಅವರ ಅಧಿಕಾರದ ಅವಧಿ ಹಾಗೂ ಪಂಚಾಯತಿನಿಂದ ಸಿಗುವ ಸೌಲಭ್ಯಗಳನ್ನು ವಿಮರ್ಶಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಅಧ್ಯಯನದ ಪ್ರಮುಖ ವಿಷಯವಾದ ಅಸಂಘಟಿತ ಕಾರ್ಮಿಕರಿಗೆ ಸರಕಾರದಿಂದ ಸಿಗುವ ಸೌಲಭದಯಗಳ ಬಗ್ಗೆ ವಿವರವಾಗಿ ವಿವರಿಸಲಾಗಿದೆ, ಇದರಲ್ಲಿ ಯಾರೆಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರು ಎಂಬ ವಿಷಯಗಳ ಬಗ್ಗೆ ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಪೆರ್ನೆ ಗ್ರಾಮದ ಅಸಂಘಟಿತ ಪುರುಷ ಕಟ್ಟಡ ಕಾರ್ಮಿಕರಿಂದ ಪಡೆದ ಮಾಹಿತಿ ಮತ್ತು ವಿಶ್ಲೇಷಣೆಗಳನ್ನು, ದುಡಿಯುವ ಪುರುಷರ ಸಮಸ್ಯೆಯನ್ನು ಸರಿಪಡಿಸುವ ಮಾರ್ಗೋಪಾಯಗಳು ಇತ್ಯಾದಿ ವಿಷಯಗಳನ್ನು ತಿಳಿಯಲಾಗುತ್ತದೆ.

ಐದನೇ ಅಧ್ಯಾಯದಲ್ಲಿ ಎರಡನೇ ಕಾರ್ಮಿಕ ಆಯೋಗದ ಶಿಫಾರಸ್ಸುಗಳು,ಕಟ್ಟಡ ಕಾರ್ಮಿಕರು ಈ ವಲಯವನ್ನು ಆರಿಸಿಕೊಂಡಿರುವುದಕ್ಕೆ ಕಾರಣಗಳನ್ನು ಚರ್ಚಿಸಲಾಗಿದೆ.

ಕೊನೇಯ ಅಧ್ಯಾಯದಲ್ಲಿ ಸಾರಾಂಶ, ಸಲಹೆ ಸೂಚನೆಗಳು ಮತ್ತು ಉಪಸಂಹಾರವನ್ನು ಪ್ರಸ್ತುತಪಡಿಸಲಾಗಿದೆ. ಕೊನೆಯಲ್ಲಿ ಅನುಬಂಧ, ಪ್ರಶ್ನಾವಳಿಯ ಬಗ್ಗೆ ಮತ್ತು ಪರಾಮರ್ಶನ ಗ್ರಂಥಗಳ ಬಗ್ಗೆ ಮಾಹಿತಿ ನೀಡಲಾಗಿದೆ.

## ಪುರುಷ ಕಟ್ಟಡ ಕಾರ್ಮಿಕರ ಅಭಿವೃದ್ಧಿಗೆ ಸಲಹೆ ಸೂಚನೆಗಳು

ಪುರುಷ ಕಟ್ಟಡ ಕಾರ್ಮಿಕರ ನೋವುಗಳಿಗೆ ಸ್ಪಂದಿಸಿ ಈ ತೊಂದರೆಗಳಿಂದ ಪಾರು ಮಾಡಲು ಕೆಲವು ಸಲಹೆ ಸೂಚನೆಗಳ ಮೂಲಕ ಕಟ್ಟಡ ಕಾರ್ಮಿಕರಿಗೆ ತಕ್ಕಮಟ್ಟಿನ ನ್ಯಾಯ ಒದಗಿಸಬಹುದಾಗಿದೆ. ಈ ಸಂಬಂಧವಾಗಿ ಕೆಲವು ಸಲಹೆಗಳನ್ನು ನೀಡಬಹುದಾಗಿದೆ.

೧. ಅಸಂಘಟಿತ ನೆಲೆಯಲ್ಲಿ ದುಡಿಯುತ್ತಿರುವ ಪುರುಷ ಕಾರ್ಮಿಕರ ವರ್ಗಗಳಿಗೆ ಅನುಗುಣವಾಗಿ ಅವರನ್ನು ಸಂಘಟಿಸಿ ಈ ಮೂಲಕ ಅವರಲ್ಲಿ ಮಾಲಿಕರಿಂದ ಮತ್ತು ಸಹೋದ್ಯೋಗಿಗಳಿಂದ ಎದುರಾಗುವ ಸಮಸ್ಯೆಗಳ ಬಗ್ಗೆ ಜಾಗೃತಿ ಮೂಡಿಸುವುದು.

೨. ಕಟ್ಟಡ ಕಾರ್ಮಿಕರಂತಹ ಅಸಂಘಟಿತ ವಲಯದಲ್ಲಿದುಡಿಯುವ ಕಾರ್ಮಿಕರಿಗೆ ಅವರ ಅಭಿವೃದ್ಧಿಗೆ ಸರಕಾರ ರೂಪಿಸಿರುವ ನೀತಿ ನಿಯಮ ಕಾನೂನುಗಳ ಬಗ್ಗೆ ತಿಳಿಯುವಂತೆ ಮಾಡುವುದು.

೩. ಕಟ್ಟಡ ಕಾರ್ಮಿಕರಂತಹ ಅಸಂಘಟಿತ ವಲಯದಲ್ಲಿ ದುಡಿಯುವ ಪುರುಷರಗಣತಿಕಾರ್ಯವನ್ನು ಕಾರ್ಮಿಕ ಕಲ್ಯಾಣ ಇಲಾಖೆಯ ಮೂಲಕ ಕೈಗೊಂಡು ಅವರಿಗೆ ಕನಿಷ್ಟ ವೇತನ ದೊರೆಯುವಂತೆ ಸರಕಾರ ಕ್ರಮ ಕೈಗೊಳ್ಳುವುದು.

೪. ಕಟ್ಟಡ ಕಾರ್ಮಿಕರಿಗೆ ಬ್ಯಾಂಕುಗಳಿಂದ ಸಿಗಬಹುದಾದಂತಹ ಧನಸಹಾಯದ ಬಗ್ಗೆ ತಿಳುವಳಿಕೆ ಮೂಡಿಸುವುದು.

೫. ಅಸಂಘಟಿತ ವಲಯದಲ್ಲಿ ದುಡಿಯುವ ಪುರುಷ ಕಾರ್ಮಿಕರನ್ನು ಕುರಿತಂತೆ ವ್ಯವಸ್ಥಿತವಾದ ಅಧ್ಯಯನವನ್ನು ಕೈಗೊಳ್ಳುವುದು.

೬. ಆರೋಗ್ಯ ತಪಾಸನಾ ಶಿಬಿರಗಳನ್ನು ಆಯೋಜಿಸಿ ಕಾರ್ಮಿಕರಿಗೆ ಮತ್ತು ಅವರ ಕುಟುಂಬದವರಿಗೆ ಆರೋಗ್ಯವನ್ನು ಕಾಯ್ದುಕೊಳ್ಳಬೇಕಾದ ಅಗತ್ಯ ಕಾರ್ಯಗಳನ್ನು ತಿಳಿಸುವುದು.

೭. ಅಸಂಘಟಿತ ಕಟ್ಟಡ ಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿ ನವೋದಯ,ಗ್ರಾಮಾಭಿವೃದ್ದಿ ಯೋಜನೆಗೆ ಸೇರಿ ಅದರ ಪ್ರಯೋಜನ ಪಡೆಯುವಂತೆ ಅವರಿಗೆ ಅರಿವು ಮೂಡಿಸುವುದು.

೮. ಅಸಂಘಟಿತ ಕಟ್ಟಡ ಕಾರ್ಮಿಕರ ವೇತನವನ್ನು ಪರಿಶೀಲಿಸುವುದು ಹಾಗೂ ಕೌಶಲ್ಯಕ್ಕೆ ಅನುಗುಣವಾಗಿ ವೇತನ ಪಾವತಿ ಮಾಡುವಂತೆ ಕ್ರಮ ಕೈಗೊಳ್ಳುವುದು.

೯. ಅಸಂಘಟಿತ ಕಟ್ಟಡ ಕಾರ್ಮಿಕರು ಎಲ್ಲರೂ ಉದ್ಯೋಗ ಖಾತರಿ ಯೋಜನೆಯಡಿಯಲ್ಲಿ ತಮ್ಮ ಹೆಸರನ್ನು ನೋಂದಾಯಿಸಿ ಸದಸ್ಯರಾಗುವಂತೆ ಹಾಗೂ ಅದರಿಂದ ಸಿಗುವ ಪ್ರಯೋಜನಗಳನ್ನು ತಿಳಿಯಪಡಿಸುವುದು.

೧೦. ಉದ್ಯೋಗದ ಸಮಯದಲ್ಲಿನ ಬದಲಾವಣೆ ಮಾಡುವುದು.ಮೂಲಭೂತ ಸೌಕರ್ಯಗಳನ್ನು ಒದಗಿಸುವುದು.ಕೆಲಸದಲ್ಲಿ ಒತ್ತಡವನ್ನು ಕಡಿಮೆ ಮಾಡುವುದು. ಆರೋಗ್ಯ ವಿಮೆ ಮತ್ತು ಕಾರ್ಮಿಕ ಭವಿಷ್ಯ ನಿಧಿ ಸೌಲಭ್ಯವನ್ನು ಒದಗಿಸುವುದು.ಸಮಾನ ಕೆಲಸಕ್ಕೆ ಸಮಾನ ವೇತನವನ್ನು ಪಾವತಿ ಮಾಡುವುದು.

೧೧. ಮೇಲೆ ತಿಳಿಸಿರುವಂತಹ ಉಪಾಯಗಳನ್ನು ಕಟ್ಟಡ ಕಾರ್ಮಿಕರಿಗೆ ಸರಕಾರ ಮತ್ತು ಸರಕಾರೇತರ ಸಂಸ್ಥೆಗಳು ಅವರ ಸಮಸ್ಯೆಗಳನ್ನು ಆದಷ್ಟು ಪರಿಹರಿಸಿ ಅನರಿಗೆ ಸರಿಯಾದ ಸಾಮಾಜಿಕ ಅರಿವು ಮೂಡಿಸುವ ಹಾಗೂ ಸಮಾಜದ ಆತ್ಮಸಾಕ್ಷಿಯನ್ನು ಜಾಗೃತಗೊಳಿಸುವ ಕಾರ್ಯವನ್ನು ಮಾಡಬೇಕಾಗಿದೆ. ಆಗ ಮಾತ್ರ ಆದಷ್ಟು ಬೇಗನೇ ಪುರುಷ ಕಾರ್ಮಿಕರು ತಮ್ಮನ್ನು ಕಾಡುವ ಸಮಸ್ಯೆಗಳಿಂದ ಒಂದಿಷ್ಟಾದರೂ ಉಪಶಮನತೆ ಪಡೆಯಬಹುದಾಗಿದೆ.

ಈ ಎಲ್ಲಾ ಕಾರ್ಯಗಳ ಮೂಲಕ ಪುರುಷ ಕಾರ್ಮಿಕರ ಸ್ಥಿತಿಗತಿಯನ್ನು ಸುಧಾರಿಸಲು ಸಾಧ್ಯವಿದೆ. ಈ ನಿಟ್ಟಿನಲ್ಲಿ ಶೀರ್ಘ ಕ್ರಮ ಕೈಗೊಳ್ಳಬೇಕಾದ ಅವಶ್ಯಕತೆ ಇದೆ. ಈ ಮೂಲಕ ಪುರುಷ ಕಾರ್ಮಿಕರು ತಮ್ಮ ವೃತ್ತಿಯ ಮೂಲಕ ಸಮಾಜದಲ್ಲಿ ಗುರುತಿಸುವಂತೆ ಮಾಡಬಹುದಾಗಿದೆ.

## ಉಪಸಂಹಾರ

ಪೆರ್ನೆ ಗ್ರಾಮದಲ್ಲಿ ಕಟ್ಟಡ ಕಾರ್ಮಿಕರು ಬಹಳ ಮಂದಿ ಇದ್ದು ಸರಕಾರ ಹಾಗೂ ಸಂಘ ಸಂಸ್ಥೆಗಳ ಜೊತೆ ಅವರನ್ನು ಗುರುತಿಸುವ , ಗೌರವದಿಂದ ಕಾಣುವ, ಅವರ ಆರ್ಥಿಕ ಕೊಡುಗೆಗಳನ್ನು ಮೌಲ್ಯಮಾಪನ ಮಾಡುವ ಮತ್ತು ಅವರ ಮುಂದಿನ ಪ್ರಗತಿಗೆ ಪ್ರೋತ್ಸಾಹ ,ಉತ್ತೇಜನ ಗಳಿಸಿಕೊಟ್ಟು ಅವರ ಸಾಮಾಜಿಕ ಪರಿಸ್ಥಿತಿ ಮತ್ತು ಸರಕಾರದಿಂದ ಸಿಗುವ ಸೌಲಭ್ಯಗಳ ಫಲಾನುಭವಿಗಳಾಗಲು ವಂಚಿತರಾಗಿದ್ದಾರೆ. ಸರಕಾರ ನೀಡುವ ಸೌಲಭ್ಯ ಅವರಿಗೆ ಸರಿಯಾಗಿ ಸಕಾಲದಲ್ಲಿ ತಲುಪುತ್ತಿಲ್ಲ. ಅವರ ಅರಿವಿನ ಕೊರತೆ ಮತ್ತು ಅವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯಿಂದಾಗಿ ಅವರು ವಂಚಿತರಾಗಿದ್ದಾರೆ. ಸೌಲಭ್ಯಗಳು ಸಕಾಲದಲ್ಲಿ ತಲುಪಿದರೆ ಅವರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳಬಹುದು.

## ಪರಾಮರ್ಶನ ಗ್ರಂಥಗಳು


೧. ಅನ್ನಪೂರ್ಣೇಶ್ವರಿ.ಎನ್, *ಭಾರತದ ಆರ್ಥಿಕಾಭಿವೃದ್ಧಿ,* ಮೈಸೂರು ಅರ್ಜುನ್ ಪಬ್ಲಿಷಿಂಗ್ ಹೌಸ್ ಮೈಸೂರು.೨೦೦೮

೨. ಅಝೀಜ್ ಅಬ್ದುಲ್, *ಅರ್ಬನ್ ಪೂರ್ಸ್ ಆಂಡ್ ಅರ್ಬನ್ ಇನ್‌ಫಾರ್ಮಲ್ ಸೆಕ್ಟರ್* ,ಆಶಿಶ್ ಪಬ್ಲಿಷಿಂಗ್ ಹೌಸ್, ನ್ಯೂ ಡೆಲ್ಲಿ ೧೯೮೪

೩. ಬೋಸ್ ಎ.ಎನ್, *ಸೋಷಿಯಲ್ ಆಂಡ್ ರೂರಲ್ ಇಕಾನಮಿ ಆಫ್ ನೋರ್ಥರ್ನ್ ಇಂಡಿಯಾ* ಯುನೈಟೆಡ್ ಪಬ್ಲಿಷರ್ ನ್ಯೂ ಡೆಲ್ಲಿ,೧೯೭೦

೪. ಚಂದ್ರಶೇಖರ ಟಿ.ಆರ್, *ಆರ್ಥಿಕತೆ* ಮತ್ತು ಅಭಿವೃದ್ಧಿ, ಹಂಪಿ ಪ್ರಸಾರಾಂಗ ಕನ್ನಡ ವಿಶ್ವವಿಧ್ಯಾಲಯ, ಅರ್ಜುನ್ ಪಬ್ಲಿಷಿಂಗ್ ಹೌಸ್ ಮೈಸೂರು ೨೦೦೧.

೫. ದೇವ್ ಅರ್ಜುನ್,ಇಂದಿರಾ ಅರ್ಜುನ್ ದೇವ್, ಸುಪ್ತಾದಾಸ್ ಅನುವಾದ ಕೆ.ಚ್.ಶ್ರೀನಿವಾಸ್ ಮಾನವ *ಹಕ್ಕುಗಳು,* ನ್ಯಾಷನಲ್ ಬುಕ್ ಆಫ್ ಇಂಡಿಯಾ ಅರ್ಜುನ್ ಪಬ್ಲಿಷಿಂಗ್ ಹೌಸ್ ಮೈಸೂರು ೨೦೦೫ .

೬. ದೇವ್ ಯಸ್ ಮಹೇಂದ್ರ, *ಫಿಮೇಲ್ ವರ್ಕ್ ಪಾರ್ಟಿಸಿಪೇಷನ್ ಆಂಡ್ ಚೈಲ್ಡ್ ಲೇಬರ್,* ಯುನೈಟೆಡ್ ಪಬ್ಲಿಷರ್ ನ್ಯೂ ಡೆಲ್ಲಿ ೨೦೦೪

೭. ದೇಶ್‌ಪಾಂಡೆ ಸುಧಾ, *ಚೇಂಜಿಂಗ್ ಸ್ಟ್ರಕ್ಚರ್ ಆಫ್ ಎಂಪ್ಲಾಯ್‌ಮೆಂಟ್* ಇನ್ ಇಂಡಿಯಾ, ಪಾಪ್ಯುಲರ್ ಪಬ್ಲಿಷಿಂಗ್ ಕಂ. ಬೋಂಬೆ ೧೯೯೬

೮. ದಿಲೀಫ್ ಕುಮಾರ್, *ಸೋಷಿಯಲ್ ಸೆಕ್ಯೂರಿಟಿ ಫಾರ್ ವಿಮೆನ್;* ಇಂಡಿಯನ್ ಜರ್ನಲ್ ಆಫ್ ಲೇಬರ್ ಇಕೋನೋಮಿಕ್ಸ್ ೧೦, ೧೯೯೬ ವಾಲ್ಯೂಮ್ ೬

೯. ಇಲಾ ಭಟ್, *ಟುವರ್ಡ್ಸ್ ಎಂಪ್ಲಾಯ್‌ಮೆಂಟ್ ,ವರ್ಲ್ಡ್ ಡೆವಲಪ್‌ಮೆಂಡ್ ರಿಪೋರ್ಟ್* ,ವಾಲ್ಯೂಮ್ ೧೭,ನಂ ೧೭.

೧೦. ಗವರ್ನ್‌ಮೆಂಟ್ ಆಫ್ ಕರ್ನಾಟಕ, *ಹ್ಯೂಮನ್ ಡೆವಲಪ್ ಮೆಂಟ್ ರಿಪೋರ್ಟ್* ಕರ್ನಾಟಕ ೧೯೯೯, *ಬೆಂಗಳೂರು, ಡಿಪಾರ್ಟ್‌ಮೆಂಟ್ ಆಫ್ ಪ್ಲಾನಿಂಗ್ ಆಂಡ್ ಸ್ಟೆಟಿಸ್ಟಿಕ್ಸ್* ೧೯೯೯.

೧೧. ಗೋಪಿನಾಥ್ ಮತೂರು, *ಮೈಗ್ರೆಂಟ್ ವಿಮೆನ್ ವರ್ಕರ್ಸ್,* ಹಿಮಾಲಯ ಪಬ್ಲಿಷರ್ ನ್ಯೂ ಡೆಲ್ಲಿ, ೧೯೮೯

೧೨. ಹೆಗಡೆ ಒಡೆಯರ್ ಡಿ ಮತ್ತು ಅನ್ನಪೂರ್ಣೇಶ್ವರಿ .ಎನ್ ,*ಆರ್ಥಿಕ ನೆಲೆಗಳು ಮತ್ತು ಆಯಾಮುಗಳು* , ಮಾನವಾಭಿವೃದ್ಧಿ ಕೇಂದ್ರ ಮೈಸೂರು ಅರ್ಜುನ್ ಪಬ್ಲಿಷಿಂಗ್ ಹೌಸ್ ಮೈಸೂರು. ೨೦೦೨.

೧೩. ಹೆಗಡೆ ಒಡೆಯರ್ ಡಿ ಮತ್ತು ಅನ್ನಪೂರ್ಣೇಶ್ವರಿ .ಎನ್ , *ಭಾರತದ ಆರ್ಥಿಕಾಭಿವೃದ್ಧಿ* ,ಮಾನವಾಭಿವೃದ್ಧಿ ಕೇಂದ್ರ ಮೈಸೂರು ೨೦೦೪. ಅರ್ಜುನ್ ಪಬ್ಲಿಷಿಂಗ್ ಹೌಸ್ ಮೈಸೂರು

೧೪. *ಹ್ಯೂಮನ್ ರೈಟ್ಸ್–ಎ ವೆರಿ ಶಾರ್ಟ್ ಇಂಟ್ರಡಕ್ಷನ್,ಆಂಡ್ರೂ ಕ್ಲಾಪ್ ಹಮ್* ,ಆಕ್ಸ್ ಫರ್ಡ್ ಯುನಿವರ್ಸಿಟಿ ಪ್ರೆಸ್ ೨೦೦೭. ವಾಲ್ಯೂಮ್ ೮

೧೫. ಐ.ಬಿ.ಐ.ಡಿ.ಸೆಕ್ಷನ್ ೨(ಎಮ್) ೨೦೦೩.

೧೬. ಐ.ಬಿ.ಯ.ಡಿ. ಎಚ್ ೭೩ ೨೦೧೨.

೧೭. ಐ.ಎಲ್.ಒ, *ರಿಪೋರ್ಟ್ ಆನ್ ಉಮೆನ್ ಇನ್ ಲೇಬರ್ ಮಾರ್ಕೆಟ್*, ಬೋಂಬೆ ೨೦೦೩

೧೮. ಜಯಶೀಲ ಶೌಕತ್ ಆಲಿ ಎಂ ಮೇಗಲಮನಿ ,ಸುಧಾಕರ ಎಸ್ ,ಕಿಸಾನ್ ಪಬ್ಲಿಕೇಷನ್ಸ್ ಮಂಗಳೂರು ೨೦೦೧.

೧೯. ಜೋನ್ ಪಿ ದುರಾನ್ ,*ದಿ ಲೇಬರ್ ಫೋರ್ಸ್ ಇನ್ ಇಕೊನೋಮಿಕ್ ಡೆವಲಪ್ಮೆಂಟ್*,೧೯೭೫ ಪಾಪ್ಯುಲರ್ ಪಬ್ಲಿಷಿಂಗ್ ಕಂಪನಿ ಬೋಂಬೆ.

೨೦. ಗವರ್ನಮೆಂಟ್ ಆಫ್ ಇಂಡಿಯಾ ,*ರೋಯಲ್ ಕಮಿಷನ್ ಆನ್ ಲೇಬರ್ ಇನ್ ಇಂಡಿಯಾ* ,ಕಲ್ಕತ್ತಾ,೧೯೩೧

೨೧. ಕರ್ನಾಟಕ ವಿಕಾಸ, ಮೇ ೨೦೧೭, *ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಕಾಯಿದೆ.* ವಾಲ್ಯೂಮ್ ೪

೨೨. ಕರ್ನಾಟಕ ವಿಕಾಸ ೨೦೧೭ , ಜೂನ್ ೨೦೧೭ ವಾಲ್ಯೂಮ್ ೫

೨೩. ಕಿಶೋರ್ ಸಿ ಸಮಲ್,*ಗ್ರೋಥ್ ಆಫ್ ಇನ್ಫಾರ್ಮಲ್ ಸೆಕ್ಟರ್ ಇನ್ ಇಂಡಿಯಾ* , ಯುನೈಟೆಡ್ ಪಬ್ಲಿಷರ್ ನ್ಯೂ ಡೆಲ್ಲಿ ೨೦೦೫.

೨೪. ಕೀಥ್ ಇವಿಂಗ್ ,ಏಲೀನ್ ಮ್ಯಾಕ್ ಕೊಲ್ಗನ್ ಆಂಡ್ ಹಗ್ ಕೊಲ್ಲಿನ್ಸ್ ಲೇಬರ್ ಲಾ,*ಕೇಸಿಸ್, ಟೆಕ್ಸ್ಟ್ಸ ಆಂಡ್ ಮೆಟೆರಿಯಲ್ಸ್* (೨೦೦೫) ಹಾರ್ಟ್ ಪಬ್ಲಿಷಿಂಗ್ ಹೌಸ್ ಬೊಂಬಾಯಿ

೨೫. ಕೇಶ್ವನ್ ವಾಕರ್ ಆಂಡ್ ಅರ್ನ್ ಮೋರೆಲ್,ಲೇಬರ್ ಆಂಡ್ ಎಂಪ್ಲಾಯ್ಮೆಂಟ್ : ವರ್ಕ್ ಪ್ಲೇಸ್ ವಾರ್ ರ್ಥೋನ್, ಜಾರ್ಜ್ ಟೌನ್ ಯುನಿವರ್ಸಿಟಿ ಥಿಸಿಸ್ (೨೦೦೫).

೨೬. ಮಹಾಜನ್ ಅಶ್ವಿನಿ (ಮೂಲ) *ಜಾಗತೀಕರಣ ಮತ್ತು ಉದ್ಯೋಗ ,ಸ್ವದೇಶಿ ಜಾಗರಣ ಮಂಚ್ ಕರ್ನಾಟಕ* ಅರ್ಜುನ್ ಪಬ್ಲಿಷಿಂಗ್ ಹೌಸ್ ಮೈಸೂರು ೧೯೯೮

೨೭. ನಾರ್ಮನ್ ಸೆಲ್ವಿನ್ ಸೆಲ್ವಿನ್ಸ್ ಲಾ ಆಫ್ ಎಂಪ್ಲಾಯ್ಮೆಂಟ್ (೨೦೦೮) *ಆಕ್ಸ್ ಫರ್ಡ್ ಯುನಿವರ್ಸಿಟಿ ಪ್ರೆಸ್* ನ್ಯೂ ಡೆಲ್ಲಿ .೧೯೯೮.

೨೮. *ನ್ಯಾಷನಲ್ ಕಮಿಷನ್ ಆನ್ ರೂರಲ್ ಲೇಬರ್ ರಿಪೋರ್ಟ್*, ಗಮರ್ನಮೆಂಟ್ ಆಫ್ ಇಂಡಿಯಾ,೧೯೮೭–೯೧

೨೯. *ನ್ಯಾಷನಲ್ ಇನ್ಫರ್ಮೇಶನ್ ಸೆಂಟರ್*, ಎ ವಿಂಗ್, ಶಾಸ್ತ್ರೀ ಭವನ್ .ಡಾ.ರಾಜೇಂದ್ರಪ್ರಸಾದ್ ರೋಡ್ ನ್ಯೂಡೆಲ್ಲಿ ೨೦೦೫.

೩೦. *ನ್ಯಾಷನಲ್ ಫೆಡರೇಷನ್ ಆಫ್ ಮಝುಮ್ದಾರ್ಸ್*, ಮುಂಬಯಿ, ಪಾಪ್ಯುಲರ್ ಪಬ್ಲಿಷಿಂಗ್ ಕಂಪನಿ ಬೋಂಬೆ.೨೦೦೪

೩೧. ಪಂಕಜ್, *ಇಕಾನಾಮಿಕ್ ಆಂಡ್ ಪೊಲಿಟಿಕಲ್ ವೀಕ್ಲಿ*, ೨೦೦೧ ವಾಲ್ಯುಮ್ ೫

೩೨. ಪೂಜಾರಿ ಚಂದ್ರ ಎಂ, *ಸಂಶೋಧನಾ ಪ್ರಸ್ತಾವ*, ಹಂಪಿ ವಿದ್ಯಾರಣ್ಯ ಪ್ರಸಾರಾಂಗ ಕನ್ನಡ ವಿಶ್ವವಿಧ್ಯಾಲಯ ೨೦೦೮.

೩೩. ಸಮಲ್ ಕೆ.ಸಿ, *ಅರ್ಬನ್ ಇನ್ಫಾರ್ಮಲ್ ಸೆಕ್ಟರ್* ,ಮನಕ್ ಪಬ್ಲಿಕೇಷನ್ಸ್ ನ್ಯೂ ಡೆಲ್ಲಿ ,೧೯೯೦

೩೪. ಶಿಶಿಲ ಪ್ರಭಾಕರ ಬಿ, *ಅಭಿವೃದ್ಧಿಯ ಅರ್ಥಶಾಸ್ತ್ರ* ,ಮಂಗಳ ಪ್ರಕಾಶನ ,ಮಂಗಳೂರು ೨೦೦೨

೩೫. ಸುಬ್ರಹ್ಮಣ್ಯ, ಲೇಬರ್ ರಿಫಾರ್ಮ್ ಆಂಡ್ ಸೋಷಿಯಲ್ ಸೇಫ್ಟಿ, *ಇಂಡಿಯನ್ ಜರ್ನಲ್ ಆಫ್ ಲೇಬರ್* ಇಕಾನಾಮಿಕ್ಸ್, ಯುನೈಟೆಡ್ ಪಬ್ಲಿಷರ್ ನ್ಯೂ ಡೆಲ್ಲಿ ೧೯೯೫

೩೬. ಸೇನ್ ಅಮರ್ತ್ಯ, *ಡೆವಲಪ್‌ಮೆಂಟ್ ಏಸ್ ಫ್ರೀಡಮ್* ,ಓಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್ ನ್ಯೂಯಾರ್ಕ್, ೨೦೦೦.

೩೭. ಸೈಮನ್ ಡಿಕೆನ್ ಆಂಡ್ ಗಿಲ್ಲಿಯನ್ ಮೊರಿಸ್ *ಲೇಬರ್ ಲಾ* (೨೦೦೫) ಹಾರ್ಟ್ ಪಬ್ಲಿಷಿಂಗ್ ನ್ಯೂ ಡೆಲ್ಲಿ.

೩೮. ಸೈಮನ್ ಹನಿಬಾಲ್, ಹನಿಬಾಲ್ ಆಂಡ್ ಬೌವರ್ಸ್‌ಟೆಕ್ಸ್ಟ *ಬುಕ್ ಆನ್ ಎಂಪ್ಲಾಯ್ಮೆಂಟ್ ಲಾ* (೨೦೦೮) ಆಕ್ಸ್ ಫರ್ಡ್ ಯುನಿವರ್ಸಿಟಿ ಪ್ರೆಸ್ ಬೆಂಗಳೂರು ೨೦೦೨

೩೯. *ಸೆಕ್ಷನ್ ೨(೧) ಆಫ್ ದಿ ಅನ್‌ಆರ್ಗನೈಜ್ಡ್ ವರ್ಕರ್ಸ್ ಸೋಷಿಯಲ್ ಸೆಕ್ಯೂರಿಟಿ ಆಕ್ಟ್* ೨೦೦೮.

೪೦. ಸುದರ್ಶನ್, ಸುಪ್ರ ನೋಟ್ ೨೨, ಎಚ್ ೫೪.

೪೧. ತಿವಾರಿ ಆರ್. ಎಸ್. *ಇನ್ಫಾರ್ಮಲ್ ಸೆಕ್ಟರ್ ವರ್ಕರ್ ,ಪ್ರಾಬ್ಲಮ್ಸ್ ಆಂಡ್ ಪ್ರೋಸ್ಪೆಕ್ಟ್ಸ್*, ಯುನೈಡೆಡ್ ಪಬ್ಲಿಷರ್ ನ್ಯೂ ಡೆಲ್ಲಿ ೨೦೦೦.

೪೨. ಯು.ಎನ್.ಡಿ.ಪಿ. *ಇಂಡಿಯಾ ಡೆವಲಪ್‌ಮೆಂಟ್ ರಿಪೋರ್ಟ್* ,೨೦೦೦ ವಾಲ್ಯೂಮ್ ೩

೪೩. ವೀನು ಅಗರ್ವಾಲ್ ,ಸುಪ್ರ ನೋಟ್ ೬ ೨೦೧೩.

44. http://labour.nic.in/main/policy.htm

45. http:// alpha.nic.in/ststhandbook/titles.htm

46. http://nceuis.nic.in.

# ಪ್ರಶ್ನಾವಳಿ

**ಅಸಂಘಟಿತ ವಲಯ ಕಟ್ಟಡ ಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ ಪೆರ್ನೆ ಗ್ರಾಮದ ಒಂದು ಅಧ್ಯಯನ**

**ಪೀಠಿಕೆ:**ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶ ಅಸಂಘಟಿತ ವಲಯ ಕಟ್ಟಡ ಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಪರಿಶೀಲಿಸುವುದು ಮತ್ತು ಪರಾಮರ್ಶೆ ನಡೆಸುವುದು.

ಸೂಚನೆಗಳು :

ಈ ಪ್ರಶ್ನಾವಳಿಯಲ್ಲಿ ವಿವಿಧ ಪ್ರಕಾರದ ಪ್ರಶ್ನೆಗಳಿವೆ . ಪ್ರಶ್ನೆಗಳಿಗೆ ಕೊಟ್ಟ ಉತ್ತರದಲ್ಲಿ ಸರಿಯಾದುದನ್ನು ಉತ್ತರಿಸಿದರಾಯಿತು.

ಈ ಸಮೀಕ್ಷೆಯನ್ನು ಕೇವಲ ಅಧ್ಯಯನದ ಉದ್ಧೇಶಕ್ಕಾಗಿ ಮಾತ್ರ ಮಾಡಲಾಗುತ್ತಿದೆ.

ನೀವು ವ್ಯಕ್ತಪಡಿಸಿರುವ ಅಭಿಪ್ರಾಯಗಳ ಗೌಪ್ಯತೆಯನ್ನು ಕಾಪಾಡಲಾಗುವುದು.

ನಿಮ್ಮ ಇತರೆ ಉಪಯುಕ್ತ ಸಲಹೆ ಮತ್ತು ಪೂರಕ ಅಭಿಪ್ರಾಯವಿದ್ದಲ್ಲಿ ಕೃತಜ್ಞತಾ ಪೂರ್ವಕವಾಗಿ ಸ್ವೀಕರಿಸಲಾಗುವುದು.

ನಿಮ್ಮ ಸಹಕಾರಕ್ಕಾಗಿ ಅನಂತ ಕೃತಜ್ಞತೆಗಳು.

೧.ವೈಯಕ್ತಿಕ ಮಾಹಿತಿ

೨.ಸಾಮಾಜಿಕ ಮಾಹಿತಿ

೩. ಉದ್ಯೋಗ ಮಾಹಿತಿ ಮತ್ತು ಆರ್ಥಿಕ ಮಾಹಿತಿ

೪. ರಾಜಕೀಯ ಮತ್ತು ಸಾಂಸ್ಕೃತಿಕ ಮಾಹಿತಿ.

**೧.ವೈಯಕ್ತಿಕ ಮಾಹಿತಿ**

೧.ಹೆಸರು:

ವಯಸ್ಸು : ಅ) ೧೪-೧೮ ಆ)೧೮-೨೦ ಇ) ೨೧-೩೦ ಈ)೩೦-೪೦ ಉ)೪೦ಮತ್ತು ಮೇಲ್ಪಟ್ಟು

ವಿವಾಹಿತ : ಹೌದು ಅಲ್ಲ

ವಿವಾಹಿತರಾಗಿದ್ದಲ್ಲಿ ಮಕ್ಕಳ ಸಂಖ್ಯೆ : ಗಂಡು ಹೆಣ್ಣು

೨.ಶಿಕ್ಷಣ : ಅ) ಪ್ರಾಥಮಿಕ ಆ)ಪ್ರೌಢ ಇ)ಪದವಿಪೂರ್ವ ಈ) ಪದವಿ

ಧರ್ಮ : ಅ)ಹಿಂದು ಆ)ಮುಸ್ಲಿಂ ಇ) ಕ್ರಿಶ್ಚಿಯನ್ ಈ)ಇತರೆ

ಹಿಂದು ಆಗಿದ್ದಲ್ಲಿ ಯಾವ ಜಾತಿಗೆ ಸೇರಿದವರು : ಅ) ಮುಂದುವರಿದ ಆ)ಹಿಂದುಳಿದ ಇ) ಪರಿಶಿಷ್ಟ ಜಾತಿ ಈ)ಪರಿಶಿಷ್ಟ ಪಂಗಡ ಉ) ಅಲ್ಪಸಂಖ್ಯಾತರು ಊ)ಇತರೆ ಹಿಂದುಳಿದ

೩. ನೀವು ಎಷ್ಟು ಮಕ್ಕಳನ್ನು ಹೊಂದಿದ್ದೀರಿ?

ಅ)ಒಂದು ಆ) ಎರಡು ಇ) ಎರಡಕ್ಕಿಂತ ಹೆಚ್ಚು ಈ) ಮಕ್ಕಳಿಲ್ಲ

ಮಕ್ಕಳಿದ್ದರೆ ಗಂಡೋ ಹೆಣ್ಣೋ

೪.ಮಕ್ಕಳು ಶಾಲೆಗೆ ಹೋಗುತ್ತಿದ್ದಾರಾ? : ಅ)ಹೌದು ಆ) ಇಲ್ಲ

೫. ನೀವು ಕೆಲಸ ಮಾಡುವಲ್ಲಿ ಮಾನಸಿಕ ಒತ್ತಡ ಇದೆಯೇ? ಅ) ಹೌದು ಆ)ಇಲ್ಲ

೬. ನಿಮ್ಮ ವಿಧ್ಯಾಭ್ಯಾಸಕ್ಕೂ ಕೆಲಸಕ್ಕೂ ಸಂಬಂಧವಿದೆಯೇ? ಅ) ಹೌದು ಆ) ಇಲ್ಲ

೭. ನಿಮಗೆ ಸ್ವಂತ ಜಮೀನು ಇದೆಯಾ? ಅ)ಹೌದು ಆ)ಇಲ್ಲ

೮.ನೀವು ಕೃಷಿ ಜಮೀನನ್ನು ಹೊಂದಿದ್ದೀರಾ? ಅ)ಹೌದು ಆ)ಇಲ್ಲ

**೨.ಸಾಮಾಜಿಕ ಮಾಹಿತಿ**

೯. ನೀವು ಸ್ವಂತ ಮನೆಯನ್ನು ಹೊಂದಿದ್ದೀರಾ? ಅ) ಹೌದು ಆ)ಇಲ್ಲ

೧೦. ನೀವು ಯಾವ ತರಹದ ಮನೆಯನ್ನು ಹೊಂದಿದ್ದೀರಿ? ಅ)ಗುಡಿಸಲು ಆ)ಹೆಂಚಿನ ಮನೆ ಇ)ತಾರಸಿ ಮನೆ

೧೧. ನಿಮಗೆ ನೀರಿನ ಸಂಪರ್ಕ ಮತ್ತು ವಿದ್ಯುತ್ ಸಂಪರ್ಕ ಇದೆಯೇ? ಅ)ಹೌದು ಆ)ಇಲ್ಲ

೧೨.ನೀವು ಶೌಚಾಲಯವನ್ನು ಹೊಂದಿದ್ದೀರಾ? ಅ)ಹೌದು ಆ)ಇಲ್ಲ

೧೩.ಸಾರಿಗೆ ಸಂಪರ್ಕ ಇದೆಯಾ? ಅ)ಹೌದು ಆ)ಇಲ್ಲ

**೩.ಉದ್ಯೋಗ ಮಾಹಿತಿ ಮತ್ತು ಆರ್ಥಿಕ ಮಾಹಿತಿ**

೧೪. ನೀವು ಈ ವಲಯದಲ್ಲಿ ದುಡಿಯಲು ಕಾರಣ ಅ)ಹಣಕಾಸಿನ ಅವಶ್ಯಕತೆ ಆ) ಬೇರೆ ಯಾವುದೇ ಕೆಲಸ ಸಿಗದಿರುವುದು ಇ)ಸ್ವ ಇಚ್ಚೆ ಈ) ಇತರೇ

೧೫. ಮಧ್ಯಾಹ್ನ ಸಮಯದಲ್ಲಿ ಎಷ್ಟು ಗಂಟೆ ವಿಶ್ರಾಂತಿ ಪಡೆಯುತ್ತೀರಿ?

ಅ) ೧/೨ ಗಂಟೆ ಆ) ೧ ಗಂಟೆ ಇ) ೨ ಗಂಟೆ

೧೬. ನೀವು ಇದೇ ವಲಯದಲ್ಲಿ ಮುಂದುವರಿಯಲು ಬಯಸುತ್ತೀರಾ? ಅ)ಹೌದು ಆ) ಇಲ್ಲ

೧೭. ಕೌಟುಂಬಿಕ ಒತ್ತಡ ನಿಮ್ಮ ವೃತ್ತಿಗೆ ಕಿರಿಕಿರಿ ಮಾಡುವುದೇ? ಅ) ಹೌದು ಆ) ಇಲ್ಲ

೧೮. ನಿಮ್ಮ ವೇತನವನ್ನು ಮನೆಯವರು ಎಷ್ಟರ ಮಟ್ಟಿಗೆ ಅವಲಂಬಿಸಿದ್ದಾರೆ?

ಅ) 0% ಆ) ೫೦% ಇ) ೭೫% ಈ)೧೦೦%

೧೯. ನಿಮ್ಮ ವೇತನ ಖರ್ಚಿನ ಉದ್ದೇಶ

ಅ) ಉಳಿತಾಯ ಆ) ಮನೆಖರ್ಚು ಇ) ಸಾಲತೀರಿಸಲು ಈ)ವಸ್ತ್ರಾಭರಣ ಖರೀದಿ

೨೦. ನೀವು ಸೇವೆ ಸಲ್ಲಿಸುತ್ತಿರುವ ಕ್ಷೇತ್ರ ನಿಮಗೆ ತೃಪ್ತಿ ನೀಡಿದೆಯೇ?

ಅ)ಉನ್ನತ ಮಟ್ಟದಲ್ಲಿ ನೀಡಿಲ್ಲ ಆ)ಸಮಧಾನವಿಲ್ಲ ಇ)ಸಮಧಾನವಿದೆ

೨೧. ಒಂದು ವಾರದಲ್ಲಿ ಎಷ್ಟು ದಿನ ಕೆಲಸ ಮಾಡುತ್ತೀರಿ?

ಅ) ಎಲ್ಲಾ ದಿನ ಆ) ಆರು ದಿನ ಇ)ಐದು ದಿನ ಈ)ಐದಕ್ಕಿಂತ ಕಡಿಮೆ

೨೨. ನಿಮ್ಮ ಹಿಂದಿನ ಸ್ಥಿತಿಗತಿಗಿಂತ ಈಗಿನ ಸ್ಥಿತಿ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಉತ್ತಮವಾಗಿದೆಯೇ?

ಅ) ಹೌದು ಆ) ಇಲ್ಲ

೨೩. ಯಾವುದೇ ಸಮಾರಂಭಗಳಿರುವಾಗ ಯಾವ ರೀತಿ ಸಮಯವನ್ನು ಹೊಂದಿಸಿಕೊಳ್ಳುತೀರಿ?

ಅ)ರಜೆ ಮಾಡುವುದು ಆ) ಮಧ್ಯಾಹ್ನದ ಸಮಯ ಇ)ಬೇಗ ಕೆಲಸ ಆರಂಭ ಮಾಡುವುದು

೨೪.ನೀವು ವಿಮಾ ಸೌಲಭ್ಯವನ್ನು ಹೊಂದಿದ್ದೀರಾ? ಅ) ಹೌದು ಆ) ಇಲ್ಲ

೨೫.ನೀವು ಉದ್ಯೋಗ ಖಾತರಿ ಯೋಜನೆಯಡಿಯಲ್ಲಿ ನೋಂದಾವಣೆ ಮಾಡಿಸಿದ್ದೀರಾ?

ಅ)ಹೌದು ಆ)ಇಲ್ಲ

೨೬.ವಯಕ್ತಿಕ ಕಾರಣ ಮತ್ತು ಅನಾರೋಗ್ಯದ ನಿಮಿತ್ತ ನೀವು ಎಷ್ಟು ದಿವಸ ರಜೆ ಮಾಡುತ್ತೀರಿ?

ಅ)ಯಾವಾಗಲಾದರೊಮ್ಮೆ ಆ)ವಾರದಲ್ಲಿ ಒಂದು ದಿನ ಇ)ತಿಂಗಳಲ್ಲಿ ನಾಲ್ಕು ದಿನ ಈ)ರಜೇನೇ ಹಾಕಲ್ಲ

೨೭. ನಿಮ್ಮನ್ನು ಯಾವ ರೀತಿ ಜನರು ಗುರುತಿಸುತ್ತಾರೆ?

ಅ)ಕೌಶಲ್ಯ ಸಹಿತ ಕೆಲಸಗಾರನನ್ನಾಗಿ ಆ) ಕಡಿಮೆ ಸಂಬಳಕ್ಕಾಗಿ ಇ)ಸಮಯಪ್ರಜ್ಞೆ

೨೮. ಕೆಲಸಕ್ಕೆ ಬೇಕಾದ ಸಾಮಾಗ್ರಿಗಳು ನಿಮ್ಮಲ್ಲೇ ಇದೆಯೇ? ಅ) ಹೌದು ಆ) ಇಲ್ಲ

೨೯.ಯಜಮಾನರು ಎಷ್ಟು ಸಮಯ ಕೆಲಸದಿಂದ ಹೊರಗಿಡುತ್ತಾರೆ?

ಅ)ಒಂದು ವಾರ ಆ)ಒಂದು ತಿಂಗಳು ಇ)ಎರಡು ತಿಂಗಳು ಈ) ಎರಡಕ್ಕಿಂತ ಅಧಿಕ

೩೦. ನಿಮಗೆ ಈ ಕೆಲಸದಿಂದ ಬರುವ ಸಂಬಳದಿಂದ ನೀಮ್ಮ ಸಂಸಾರವನ್ನು ನಡೆಸಲು ಸಾಧ್ಯವಾಗುತ್ತಿದೆಯೇ?

ಅ)ಹೌದು ಆ) ಇಲ್ಲ

೩೧. ಎಷ್ಟು ವರ್ಷದಿಂದ ಈ ವಲಯದಲ್ಲಿ ದುಡಿಯುತ್ತಿದ್ದೀರಿ?

ಅ)ಒಂದಕ್ಕಿಂತ ಕಡಿಮೆ ಆ)೧–೩ ಇ) ೩–೫ ಈ)೫ಕ್ಕಿಂತ ಹೆಚ್ಚು

೩೨. ನೀವು ಈ ವಲಯದಲ್ಲಿ ಕೆಲಸ ಮಾಡಲು ಇಷ್ಟಪಡುತ್ತೀರಾ? ಅ) ಹೌದು ಆ) ಇಲ್ಲ

೩೩. ನಿಮಗೆ ಕೆಲಸದ ಭದ್ರತೆ ಇದೆಯೇ? ಅ)ಹೌದು ಆ) ಇಲ್ಲ

೩೪.ಯಾವ ತರಹದ ಭದ್ರತೆ ಇದೆ? ಅ)ಕನಿಷ್ಟ ಕೂಲಿ ಕಾಯಿದೆ ಆ)ಲೇಬರ್ ಆಕ್ಟು

೩೫. ನಿಮಗೆ ಆರೋಗ್ಯ ರಕ್ಷಣೆ ಇದೆಯೇ? ಅ) ಹೌದು ಆ) ಇಲ್ಲ

೩೬. ದುಡಿಯುವ ಸ್ಥಳದಲ್ಲಿ ಸರಿಯಾದ ವೇತನ ಪಾವತಿ ಮಾಡುತ್ತಾರೆಯೇ? ಅ)ಹೌದು ಆ) ಇಲ್ಲ

೩೭. ದುಡಿಯುವ ಸ್ಥಳದಲ್ಲಿ ಮೂಲಭೂತ ಸೌಕರ್ಯಗಳಿವೆಯೇ? ಅ) ಹೌದು ಆ)ಇಲ್ಲ

೩೮. ದಿನಕ್ಕೆ ಎಷ್ಟು ವೇತನವನ್ನು ಪಡೆಯುತ್ತಿದ್ದೀರಿ?

ಅ)೨೦೦ ಕ್ಕಿಂತ ಕಡಿಮೆ ಆ) ೨೦೦–೩೦೦ ಇ) ೩೦೦–೫೦೦ ಈ) ೫೦೦ ಕ್ಕಿಂತ ಅಧಿಕ

೩೯. ಊಟದ ಸಮಯ ಹೊರತುಪಡಿಸಿ ನೀವು ದಿನಕ್ಕೆ ಎಷ್ಟು ಗಂಟೆ ಕೆಲಸ ಮಾಡುತ್ತೀರಿ?

ಅ)೬ಗಂಟೆ ಆ)೭ ಗಂಟೆ ಇ) ೮ ಗಂಟೆ

೪೦. ನಿಮ್ಮ ಈ ವೇತನದಿಂದ ಮನೆಯ ಖರ್ಚು ಹಾಗೂ ಮಕ್ಕಳ ವಿಧ್ಯಾಭ್ಯಾಸಕ್ಕೆ ಸಾಕಾಗುತ್ತದೆಯೇ?

ಅ) ಹೌದು ಆ) ಇಲ್ಲ

೪೧.ನಿಮ್ಮ ಮಕ್ಕಳು ದುಡಿಯುತ್ತಾರಾ? ಅ)ಹೌದು ಆ)ಇಲ್ಲ

೪೨.ಮಕ್ಕಳ ದುಡಿಮೆ ನಿಮಗೆ ಎಷ್ಟರ ಮಟ್ಟಿಗೆ ಸಹಾಯಕ್ಕೆ ಬರುತ್ತದೆ?

ಅ)ಎಲ್ಲಾ ಸಹಾಯಕ್ಕೆ ಬರುತ್ತೆ ಆ)ತಕ್ಕಮಟ್ಟಿಗೆ ಇ)ಸಹಾಯಕ್ಕೆ ಬರಲ್ಲ

೪೩.ನೀವು ಎಷ್ಟು ಸಾಲ ಮಾಡಿದ್ದೀರಿ?

ಅ)೧೦೦೦೦ ಕ್ಕಿಂತ ಕಡಿಮೆ ಆ)೧೦೦೦೦–೨೦೦೦೦ ಇ)೨೦೦೦೦–೪೦೦೦೦ ಈ)೫೦೦೦೦ ಕ್ಕಿಂತ ಅಧಿಕ

೪೪.ನಿಮ್ಮ ಸಾಲದ ಮೂಲ ಯಾವುದು?

ಅ)ಸ್ವ ಸಹಾಯ ಸಂಘ ಆ)ಸಹಕಾರಿ ಬ್ಯಾಂಕ್ ಇ)ರಾಷ್ಟ್ರೀಕೃತ ಬ್ಯಾಂಕ್ ಈ) ಸ್ನೇಹಿತರು

೪೫.ರಜಾ ಸಮಯದಲ್ಲಿ ನಿಮ್ಮ ಸೇವೆಯನ್ನು ಪರಿಗಣಿಸುತ್ತಾರಾ? ಅ)ಹೌದು ಆ)ಇಲ್ಲ

೪೬ .ಆ ಸಮಯದಲ್ಲಿ ನೀವು ಹೆಚ್ಚಿನ ವೇತನವನ್ನು ಪಡೆಯುತ್ತೀರಾ? ಅ)ಹೌದು ಆ)ಇಲ್ಲ

೪೭.ನಿಮ್ಮ ನಿರ್ಧಾರಕ್ಕೆ ಮನೆಯಲ್ಲಿ ಮನ್ನಣೆ ಇದೆಯೇ? ಅ)ಹೌದು ಆ)ಇಲ್ಲ

೪೮.ನೀವು ಸ್ಮಾರ್ಟ್ ಫೋನ್ ಹೊಂದಿದ್ದೀರಾ? ಅ)ಹೌದು ಆ)ಇಲ್ಲ

೪೯.ಕಂಪ್ಯೂಟರ್ ಕೌಶಲ್ಯ ಇದೆ ಇಲ್ಲ

೫೦.ಟಿ.ವಿ. ಇದೆ ಇಲ್ಲ

೫೧.ರೆಫ್ರಿಜರೇಟರ್ ಇದೆ ಇಲ್ಲ

೫೨.ವಾಷಿಂಗ್ ಮೆಷಿನ್ ಇದೆ ಇಲ್ಲ

೫೩. ನಿಮಗೆ ಸರಕಾರದಿಂದ ಯಾವುದೇ ಸೌಲಭ್ಯಗಳು ಸಿಗುತ್ತದೆಯೇ? ಅ) ಹೌದು ಆ)ಇಲ್ಲ

೫೪. ನೀವು ಎಷ್ಟು ಜನರಿಗೆ ಉದ್ಯೋಗವನ್ನು ಕಲ್ಪಿಸಿಕೊಟ್ಟಿದ್ದೀರಿ?

ಅ) ೫ ಕ್ಕಿಂತ ಕಡಿಮೆ ಆ) ೫–೧೦ ಇ) ೧೦ ಕ್ಕಿಂತ ಅಧಿಕ

೫೫.ಈ ಕೆಲಸವನ್ನು ಬಿಟ್ಟು ನಿಮಗೆ ಗೊತ್ತಿರುವ ಇತರ ಕೌಶಲ್ಯಗಳು ಯಾವುವು?

ಅ) ಕೃಷಿ ಆ)ಟೈಲರಿಂಗ್ ಇ)ಡ್ರೈವಿಂಗ್ ಈ) ಇಲೆಕ್ಟ್ರೀಷಿಯನ್ ಉ) ಇನ್ನಿತರ

**<u>೪.ರಾಜಕೀಯ ಮತ್ತು ಸಾಂಸ್ಕೃತಿಕ ಮಾಹಿತಿ.</u>**

೫೬. ನೀವು ಯಾವುದಾದರೂ ಕಾರ್ಮಿಕ ಸಂಘಟನೆಯಲ್ಲಿ ಗುರುತಿಸಿಕೊಂಡಿದ್ದೀರಾ? ಅ) ಹೌದು ಆ) ಇಲ್ಲ

೫೭. ಸಾಮಾಜಿಕವಾಗಿ ನೀವು ಯಾವ ಸಂಘಸಂಸ್ಥೆಗಳಲ್ಲಿ ಗುರುತಿಸಿಕೊಂಡಿದ್ದೀರಿ?

ಅ) ನವೋದಯ ಆ) ಗ್ರಾಮಾಭಿವೃದ್ಧಿ ಯೋಜನೆ ಇ)ಇತರೇ

೫೮.ನೀವು ಯವುದಾದರು ಜಾತಿ ಸಂಘಟನೆಯಲ್ಲಿ ಪಾಲ್ಗೊಂಡಿದ್ದೀರಾ? ಅ)ಹೌದು ಆ)ಇಲ್ಲ

೫೯.ನೀವು ಯಾವುದಾದರೂ ಪಂಚಾಯತಿ ಪಕ್ಷದಲ್ಲಿ ಸದಸ್ಯರಾಗಿ ತೊಡಗಿಸಿಕೊಂಡಿದ್ದೀರಾ?

ಅ)ಹೌದು ಆ)ಇಲ್ಲ

೬೦.ನಿಮಗೆ ಭೂತಾರಾಧನೆಯಲ್ಲಿ ಮನ್ನಣೆ ಸಿಕ್ಕಿದೆಯಾ? ಅ)ಹೌದು ಆ)ಇಲ್ಲ

೬೧. ಈ ಉದ್ಯೋಗದ ಬಗ್ಗೆ ನಿಮಗೆ ಇರುವ ಅಭಿಪ್ರಾಯವೇನು?